# ವಿವಾಹ ದೀಪಿಕಾ

(ವಿವಾಹ ಪ್ರಯೋಗದ ಮಂತ್ರಗಳು ಮತ್ತು ಅರ್ಥ)

ಲೇಖಕರು

**ಥಾಳೀ ಲಕ್ಷ್ಮೀನರಸಿಂಹ ಭಟ್ಟ**

ಋಗ್ವೇದ ವಿದ್ವಾನ್

ನಂ. 582, 2ನೇ ಕ್ರಾಸ್

ಹನುಮಂತನಗರ

ಬೆಂಗಳೂರು—560 019

# ಮುನ್ನುಡಿ

## ಶ್ರೀಃ

## ಶುಭಾಶಯ

ವೇ|ಬ್ರಂ|ಶ್ರೀ–ಧಾಳೀ ಲಕ್ಷ್ಮೀನರಸಿಂಹ ಭಟ್ಟರು ನನಗೆ ಬಾಲ್ಯದಿಂದಲೂ ಚೆನ್ನಾಗಿ ಪರಿಚಯಸ್ಥರು ಇವರು ವೇದಾಧ್ಯಯನ ಸಾಂಗವಾಗಿ ಮಾಡಿ ತದರ್ಥವನ್ನು ಚೆನ್ನಾಗಿ ತಿಳಿದವರಾಗಿರುತ್ತಾರೆ. ಹಾಗೂ ಕರ್ಮಾನುಷ್ಠಾನ ತತ್ಪರರು ಶ್ರೋತ್ರೀಯರೂ ಆಗಿರುತ್ತಾರೆ.

ವೇದಭಾಷ್ಯ, ಪ್ರಯೋಗಪಾರಿಜಾತ ಆಶ್ವಲಾಯನ ಗೃಹ್ಯಸೂತ್ರ, ಸ್ಮೃತಿ, ಇತ್ಯಾದಿಗಳಲ್ಲಿ ಚೆನ್ನಾಗಿ ಪರಿಶ್ರಮ ಪಟ್ಟು ಸಮಾವರ್ತನ ಮೊದಲುಗೊಂಡು ಗೃಹಪ್ರವೇಶಾಂತ ಶುಭ ಮಂಗಳ ಕಾರ್ಯವಾದ ವಿವಾಹದಲ್ಲಿ ನಡೆಯತಕ್ಕ ಪ್ರತಿಯೊಂದು ವಿಷಯಗಳನ್ನೂ ಸಹ ಯಾಕೆ ಮಾಡಬೇಕು ಅದರ ಉದ್ದೇಶ ವೇನು? ಆಗತಕ್ಕ ಫಲವೇನು? ಇತ್ಯಾದಿ ವಿಷಯಗಳನ್ನು ಚೆನ್ನಾಗಿ ವಿವರಿಸಿ ರುವುದು ಬಹಳ ಶ್ಲಾಘನೀಯವಾಗಿರುತ್ತೆ. ಕನ್ಯಾದಾತೃ ವರ, ಕನ್ಯಾ ಇವರ ಮಹತ್ವವನ್ನು ಚೆನ್ನಾಗಿ ಉಲ್ಲೇಖಿಸಿರುತ್ತಾರೆ

"ವೃದ್ಧಾಂಗಚರಿತಮೇವ ವರಂ ಪ್ರಮಾಣಂ"

ಎಂಬ ನಾಣ್ಣುಡಿಯನ್ನು ಘೋಷಿಸಿ ದೇಶಾಚಾರ ಕುಲಾಚಾರ ಇದಕ್ಕೂ ಮಹ ತ್ವವನ್ನು ಕೊಟ್ಟಿರುತ್ತಾರೆ. ಈ ವಿಷಯವನ್ನು ಚೆನ್ನಾಗಿ ತಿಳಿದುಕೊಂಡಲ್ಲಿ ಯಲ್ಲಾ ಸಂಶಯವೂ ನಿವೃತಿಯಾಗಿ ಕರ್ಮನುಷ್ಠಾನದಲ್ಲಿ ಶ್ರದ್ಧೆಯು ಹೆಚ್ಚಾಗುವವರಲ್ಲಿ ಏನೂ ಸಂಶಯವಿಲ್ಲ ಈ ಲೇಖನವು ಸರ್ವೋಪಕಾರಿಯಾಗ ಲೆಂದು ಆಶಿಸುತ್ತೇನೆ.

**ಬಿ. ರಾಮ ಭಟ್ಟ** (ರಾಷ್ಟ್ರಪ್ರಶಸ್ತಿ ವಿಜೇತ)
ಅಧ್ಯಕ್ಷ
ಬೆಂಗಳೂರು ಶಂಕರಮಠ ಪಾಠಶಾಲ

## ಅಭಿಪ್ರಾಯ ನಿವೇದನ

ವೇ||ಬ್ರಂ||ಶ್ರೀ ವಿದ್ವಾನ್ ಧಾಳಿ ಲಕ್ಷ್ಮೀನರಸಿಂಹ ಭಟ್ಟರವರಿಗೆ ತಾವು ಬರೆದ ವಿವಾಹ ದೀಪಿಕಾ ಎಂಬ ಪುಸ್ತಕವನ್ನು ಪರಾಮರ್ಶವಾಡಿ ಇದರ ಅಭಿಪ್ರಾಯವನ್ನು ಈ ಮೂಲಕ ತಿಳಿಪಡಿಸುತ್ತೇನೆ. ಈ ಪುಸ್ತಕದಲ್ಲಿ ಸಮಾವರ್ತನೆಯಲ್ಲಿ ಬರುವ ಮಂತ್ರಗಳಿಗೂ ವಿವಾಹದಲ್ಲಿ ಬರುವ ಮಂತ್ರಗಳಿಗೂ ಕನ್ನಡ ಅರ್ಥವನ್ನು ಸ್ಪಷ್ಟವಾಗಿ ತಿಳಿಸಿರುವುದು, ಇದರಿಂದ ಸಂಸ್ಕೃತದ ಗಂಧವೆ ಇಲ್ಲದ ಜನರಿಗೆ ಮಂತ್ರಾರ್ಥವನ್ನು ತಿಳಿಯಲು ಅನುಕೂಲವಾಗಿರುವುದು. ಸಾಮಾನ್ಯ ಪುರೋಹಿತರಿಗೂ ಮಂತ್ರಾರ್ಥವನ್ನು ಮಾಡಿಕೊಳ್ಳಲು ಅನುಕೂಲವಾಗಿದೆ. ಶ್ರೀ ಲಕ್ಷ್ಮೀನರಸಿಂಹ ಭಟ್ಟರು ಇವರ ತಂದೆ, ದೊಡ್ಡಪ್ಪನವರ ಕಾಲದಿಂದಲೂ ಮೈಸೂರಿನಲ್ಲೇ ಪರಿಚಿತರಾದವರು. ತಂದೆಯಾದ ವೇ| ಭೀಮ ಭಟ್ಟರಂತೆಯೇ ಋಗ್ವೇದ ಸಂಹಿತೆಯನ್ನು ಘನಾಂತ ಅಧ್ಯಯನ ಮಾಡಿ, ಸದಾಚಾರ ಸಂಪನ್ನರಾಗಿದ್ದು ಋಗ್ವೇದ ಪ್ರಯೋಗವನ್ನು ಗೃಹಸ್ಥರಿಗೆ ಮಾಡಿಸುತ್ತಾ, ವೇದಾಧ್ಯಾಪನವನ್ನು ಶೃಂಗೇರಿ ಶ್ರೀ ಶಂಕರಮಠ ಮುಂತಾದ ಸ್ಥಳಗಳಲ್ಲಿ ಮಾಡುತ್ತಿರುವುದು ನಾಗರಿಕರಿಗೆ ವಿದಿತವೇ ಆಗಿದೆ. ಈ ನಡುವೆ ಋಗ್ವೇದ ಪ್ರಯೋಗವನ್ನು ಕನ್ನಡ ಅಕ್ಷರಗಳಲ್ಲಿ ಮುದ್ರಿಸಿ ಪ್ರಕಾಶಪಡಿಸಲು ಯತ್ನಿಸಿದ್ದಾರೆ, ಇಂತಹ ಅತ್ಯುತ್ತಮ ಧಾರ್ಮಿಕ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಇವರು ಈಗ ಬರೆದ ವಿವಾಹ ದೀಪಿಕಾ ಪುಸ್ತಕವನ್ನು ಕನ್ನಡಿಗರಲ್ಲಿ ಆಸ್ತಿಕರಾದವರು ಸ್ವೀಕರಿಸಿ ಇದರ ಪ್ರಯೋಜನವನ್ನು ಹೊಂದಿ ಇವರ ಶ್ರಮವನ್ನು ಸಾರ್ಥಕಗೊಳಿಸಿ, ಶ್ರೇಯೋವಂತರಾಗಲೆಂದು ಹಾರೈಸುತ್ತೇನೆ.

ಕೆ. ಕೃಷ್ಣ ಜೋಯಿಸ್
ಶಂಕರಮಠ
ಬೆಂಗಳೂರು

## ॥ ಶ್ರೀ ಗುರುಭ್ಯೋ ನಮಃ ॥

ವೇ|ಶ್ರೀ| ಥಾಳಿ ಲಕ್ಷ್ಮೀನರಸಿಂಹಭಟ್ಟರು (ದಿ॥ ಮೈಸೂರು ಅರಮನೆ ವಿದ್ವಾನ್ ವೇ। ಥಾಳಿ ಭೀಮಭಟ್ಟರ ಪುತ್ರರು) ಬರೆದಿರುವ ವಿವಾಹ ಪ್ರಯೋಗದ ಮಂತಾರ್ಥ ನಿಜಕ್ಕೂ ಧಾರ್ಮಿಕ ಕ್ಷೇತ್ರಕ್ಕೆ ಒಂದು ಉಪಯುಕ್ತ ಕೊಡುಗೆ. ಪೂರ್ವಕಾಲದಲ್ಲಿಯಾದರೋ ಗುರುಕುಲ ಪದ್ಧತಿಯಲ್ಲಿ ಮೊದಲು ವೇದಾಧ್ಯಯನ ಅನಂತರ ಶಾಸ್ತ್ರಾಧ್ಯಯನ ಮಾಡಿದನಂತರ ಗೃಹಸ್ಥಾಶ್ರಮವನ್ನು ಸ್ವೀಕರಿಸುತ್ತಿದ್ದುದರಿಂದ ಜನರಿಗೆ ಧಾರ್ಮಿಕ ಪ್ರಯೋಗಗಳ ಮಂತ್ರಗಳು ಬಹುಮಟ್ಟಿಗೆ ಅರ್ಥವಾಗುತ್ತಿದ್ದುವು. ಆದರೆ ಪರಿಸ್ಥಿತಿ ಬದಲಾಯಿಸಿರುವ ಈ ಕಾಲದಲ್ಲಿ ವಿವಾಹವೇ ಮೊದಲಾದ ಯಾವ ಧಾರ್ಮಿಕ ಸಮಾರಂಭವೇ ಆಗಲಿ, ಪುರೋಹಿತ ವರ್ಗ ಮಾತ್ರ ಮಂತ್ರಗಳನ್ನು ಹೇಳುತ್ತಿರುವುದು, ಉಳಿದವರೆಲ್ಲ-ಶ್ರದ್ಧೆಯಿದ್ದವರೂ ಕೂಡ-ಮಂತಾರ್ಥ ತಿಳಿಯದೆ ಬರೀ ಗದ್ದಲಮಾಡುತ್ತಿರುವುದು ಎಲ್ಲರ ಗಮನಕ್ಕೆ ಬಂದಿದೆಯಷ್ಟೆ! ಜನರು ಸಾಧ್ಯವಾದಷ್ಟೂ ಮಂತಾರ್ಥ ತಿಳಿದುಕೊಂಡು ತಮ್ಮ ಧಾರ್ಮಿಕ ಶ್ರದ್ಧೆಯನ್ನು ಹೆಚ್ಚಿಸಿಕೊಳ್ಳುವ ದಿಸೆಯಲ್ಲಿ ಇಂತಹ ಪುಸ್ತಕಗಳೆಷ್ಟು ಬಂದರೂ ಸಾಲದು. ವೇ| ಲಕ್ಷ್ಮೀನರಸಿಂಹ ಭಟ್ಟರಂತಹವರ ಆರ್ಷೇಯ ಜ್ಞಾನ ಮತ್ತು ಧಾರ್ಮಿಕ ಪ್ರಯೋಗಾನುಭವದಿಂದ ಜನರಿಗೆ ಇನ್ನೂ ಹೆಚ್ಚು ಹೆಚ್ಚಿನ ಪ್ರಯೋಜನ ದೊರಕುವಂತಾಗಲಿ.

**ಡಾ॥ ಎಸ್ ಕೃಷ್ಣ ಭಟ್ಟ**
ರಿ. ವೈಸ್ ಪ್ರಿನ್ಸಿಪಾಲ್
ಆಚಾರ್ಯ ಪಾಠಶಾಲೆ
ಬೆಂಗಳೂರು-19

ಶ್ರೀ

ವೇ|ಬ್ರ|ಶ್ರೀ ವಿದ್ವಾನ್ ಧಾಳೀ ಲಕ್ಷ್ಮೀನರಸಿಂಹಭಟ್ಟರು ಋಗ್ವೇದೀಯ ವಿವಾಹ ಮಂಗಲ ಕರ್ಮವನ್ನು ಕುರಿತು ಬರೆದಿರುವ ಈ ಶ್ರೀಕೋಶ ಶಾಸ್ತ್ರೀಯವಾಗಿ ಆ ಕರ್ಮವನ್ನು ಮಾಡುವವರಿಗೆ ಮಾಡಿಸುವವರಿಗೆ ಮತ್ತು ಇತರ ಆಸಕ್ತರಿಗೆ ಎಲ್ಲರಿಗೂ ಅತ್ಯಂತ ಉಪಯೋಗವಾಗಿದೆ. ವೇದಭಾಷ್ಯ ಗೃಹ್ಯಸೂತ್ರ ಮತ್ತು ಪೂರ್ವಸೂರಿಗಳ ಸಂಗ್ರಹ ಗ್ರಂಥಗಳನ್ನು ಆಧರಿಸಿ ಬರೆದಿರುವ ಪ್ರಾಮಾಣಿಕಗ್ರಂಥ ಸರಳ ಸುಂದರ ಬಾಷೆಯಲ್ಲಿ ಮಂತ್ರಾರ್ಥ ಗಳನ್ನು ಕನ್ನಡಕ್ಕೆ ಅನುವಾದಿಸಿರುವುದಲ್ಲದೆ ಪ್ರಯೋಗ ವಿಧಿಗಳ ಮಹತ್ವ ವನ್ನೂ ಯಥೋಚಿತವಾಗಿ ನಿರೂಪಣೆಮಾಡಿರುವುದರಿಂದ ಗ್ರಂಥದ ಪ್ರಯೋಜನ ಹೆಚ್ಚಿದೆ. ಆ ಬಗೆಗೆ ತಿಳುವಳಿಕೆ ಇಲ್ಲದೇ ಶಾಸ್ತ್ರೀಯ ಸಂಸ್ಕಾರಗಳಲ್ಲಿ ಅನಾದರಣೆ ತೋರುತ್ತಿರುವ ಜನರಿಗೆ ಜಾಗೃತಿಯನ್ನು ಉಂಟುಮಾಡುವ ಸದುದ್ದೇಶದಿಂದ ಸುರಚಿತವಾಗಿರುವ ಕೃತಿರತ್ನ.

ಗ್ರಂಥಕರ್ತರು ಶ್ರೌತಸ್ಮಾರ್ತ ಪ್ರಯೋಗ ಪಂಡಿತರು, ಸದಾಚಾರ ಸಂಪನ್ನರು, "ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಂ"ಎಂಬ ಅನುಶಾಸನವನ್ನು ನಿಷ್ಠೆಯಿಂದ ಪರಿಪಾಲಿಸುತ್ತಿರುವ ಶ್ರೋತ್ರೀಯರು "ಪಂಡಿತ ಪುತ್ರಃ ಪಂಡಿತೋವಾ ಪಂಡಿತತರೋ ವಾಂ ನತನ್ಯೂನಃ ಕದಾಚಿತ್" ಎಂಬಂತೆ ತಮ್ಮ ತೀರ್ಥರೂಪರ ಸಂಸ್ಕೃತಿ ಸಂಪ್ರದಾಯಗಳನ್ನು ಮುಂದುವರಿಸುತ್ತಿರುವ ಸುಕೃತಿ ಸದ್‌ಗೃಹಸ್ಥರು.

ಈ ಗ್ರಂಥವು ಆಸ್ತಿಕ ಸಜ್ಜನ ಸಮುದಾಯದಲ್ಲಿ ಮ[illegible]ನ್ನೂ ಸುಪ್ರಸಾರವನ್ನೂ ಸಲ್ಲಾಭವನ್ನೂ ಪಡೆಯಲಿ ಎ[illegible]ಸು[illegible].

ಪ್ರೊ. ವರದದೇಶಿಕಾಚಾರ್ಯ ರಂಗಪ್ರಿಯ,
ನಿವೃತ್ತ ಸಂಸ್ಕೃತ ಪ್ರಾಚಾರ್ಯ,
ನ್ಯಾಷನಲ್ ಕಾಲೇಜು, ಬೆಂಗಳೂರು

ಶ್ರೀಃ

ವೇದವಿದ್ವಾನ್ ಶ್ರೀ ಧಾಳಿ ಲಕ್ಷ್ಮೀನರಸಿಂಹ ಭಟ್ಟರು ನಮಗೆ ಅನೇಕ ವರ್ಷಗಳಿಂದ ಪರಿಚಿತರಾಗಿದ್ದಾರೆ. ಇವರ ತಂದೆಯವರಾದ ಶ್ರೀಧಾಳಿ ಭೀಮ ಭಟ್ಟರೂ ನನಗೆ ಪರಿಚಿತರಾಗಿದ್ದರು. ಶ್ರೀ ನರಸಿಂಹ ಭಟ್ಟರು ಅವರ ತಂದೆಯವರಂತೆ ಶ್ರೇಷ್ಠ ಋಗ್ವೇದ ಘನಪಾಠಿಗಳಾಗಿದ್ದು ಶ್ರೌತಸ್ಮಾರ್ತ ಪ್ರಯೋಗಗಳಲ್ಲಿಯೂ ನಿಷ್ಣಾತರಾಗಿದ್ದಾರೆ. ಧರ್ಮಶಾಸ್ತ್ರವನ್ನೂ ಚನ್ನಾಗಿ ಬಲ್ಲವರಾಗಿದ್ದಾರೆ.

ಪ್ರಕೃತ ಇವರು ವಿವಾಹ ಪ್ರಯೋಗದಲ್ಲಿ ಬರುವ ಮಂತ್ರಗಳಿಗೆ ಸುಲಲಿತವಾದ ಕನ್ನಡ ಅರ್ಥವನ್ನು ಬರೆದಿದ್ದಾರೆ. ಸಮಗ್ರ ಪ್ರಯೋಗ ಕ್ರಮವನ್ನೂ ಕನ್ನಡದಲ್ಲಿ ವಿವರಿಸಿದ್ದಾರೆ. ವಿವಾಹ ಪ್ರಯೋಗದಲ್ಲಿ ಬರುವ ಎಲ್ಲ ಆಚರಣೆಗಳ ಮತ್ತು ಮಂತ್ರಗಳ ಮಹತ್ವವನ್ನು ತಿಳಿಸಿ ಹೇಳಿದ್ದಾರೆ. ನಮ್ಮಲ್ಲಿ ಅನೇಕರಿಗೆ ನಾವು ಆಚರಿಸುವ ಸಂಸ್ಕಾರಗಳ ಮಹತ್ವವು ತಿಳಿದಿರುವುದಿಲ್ಲ. ಇದನ್ನು ತಿಳಿದುಕೊಳ್ಳುವುದು ಅತ್ಯಗತ್ಯ. ಈ ದೃಷ್ಟಿಯಿಂದ ಶ್ರೀ ಧಾಳಿ ಲಕ್ಷ್ಮೀನರಸಿಂಹ ಭಟ್ಟರು ಬರೆದಿರುವ ಈ ಗ್ರಂಥವು ಬಹಳ ಸಹಾಯಕವಾಗಿದೆ. ಶಾಸ್ತ್ರಸಮ್ಮತವಾಗಿಯೂ ಸಾಮಾನ್ಯರಿಗೂ ತಿಳಿಯುವಂತೆ ಸುಲಭವಾಗಿಯೂ ಈ ಗ್ರಂಥವನ್ನು ಬರೆದಿದ್ದಾರೆ. ಸಕಲ ಸಜ್ಜನರೂ ಇದರ ಪ್ರಯೋಜನವನ್ನು ಪಡೆಯಬೇಕೆಂದು ಆಶಿಸುವೆವು.

ವೇದಾಂತ, ಮೀಮಾಂಸಭೂಷಣ
**ಶ್ರೀ ಕೆ. ಟಿ. ಪಾಂಡುರಂಗಿ**
ಉಪಕುಲಪತಿ
ಪೂರ್ಣಪ್ರಜ್ಞ ವಿದ್ಯಾಪೀಠ
ಬೆಂಗಳೂರು

ಬ್ರಹ್ಮಶ್ರೀ ಧಾಳಿ ಲಕ್ಷ್ಮೀನರಸಿಂಹ ಭಟ್ಟರವರು ದೊಡ್ಡ ವೇದ ವಿದ್ವಾಂಸರ ಮನೆತನಕ್ಕೆ ಸೇರಿದವರು. ಸ್ವತಃ ವಿದ್ವಾಂಸರು ಮತ್ತು ಕರ್ಮಾನುಷ್ಠಾನಪರರು.

ಅವರು ವಿವಾಹ ವಿಧಿಗೆ ಸಂಬಂಧಿಸಿದ ವಿಷಯವಾಗಿ ಗ್ರಂಥರಚನೆ ಮಾಡಿದ್ದಾರೆಂಬುದು ಸ್ತುತ್ಯವತ್ತು ಅಭಿನಂದನೀಯ ವಿಷಯ

ವಿವಾಹ ನಮ್ಮಲ್ಲಿ ಷೋಡಶಕರ್ಮಗಳಲ್ಲಿ ಒಂದು. ಮದುವೆ ಒಂದು ಗಂಡು ಮತ್ತು ಹೆಣ್ಣಿನ ಸಂಬಂಧ ಪ್ರಶ್ನೆಮಾತ್ರವಲ್ಲ-ಧರ್ಮ ವಿಧಿ. ಸಮಾಜ ಭದ್ರವಾಗಿ, ಶ್ರೇಯಸ್ಕಾರಿಯಾಗಿ ಬೆಳೆಯಬೇಕಾದರೆ ಶುಚಿಯಾದ ಶುಭ್ರವಾದ ಆದರ್ಶಪ್ರಾಯವಾದ ಕುಟುಂಬ ಜೀವನ ಅತ್ಯಗತ್ಯ. ಆ ಜೀವನ ಧರ್ಮ ಬದ್ಧವಾಗಿರಬೇಕು. ಇದೇ ವೈದಿಕ ಕರ್ಮಾನುಷ್ಠಾನದ ಗುರಿ. ನಮ್ಮ ಪ್ರಾಚೀನ ಋಷಿಗಳ ಆದರ್ಶ, ಸಮಾಜಕಲ್ಯಾಣದ ಆಶೆ, ಅವರು ಅನುಸರಿಸಿದ ಮಾರ್ಗ, ಉತ್ಕೃಷ್ಟವಾದದ್ದು. ಸಮಾಜ ಮತ್ತು ಕುಟುಂಬದ ಜೀವನ. ಅಸ್ತವ್ಯಸ್ತವಾಗುತ್ತಿರುವ ಈ ಕಾಲದಲ್ಲಿ ಈ ವೈದಿಕ ಕರ್ಮದ ಅರಿವು ನಮ್ಮ ಜನರಿಗೆ ಅತ್ಯಗತ್ಯ.

ಈ ಗ್ರಂಥದಿಂದ, ನಮ್ಮ ಆಸ್ತಿಕ ಜನ ಸಂತೋಷವನ್ನೂ, ಉಪಯೋಗ ವನ್ನೂ ಪಡೆಯಲಿ ಎಂದು ಹಾರೈಸುತ್ತೇನೆ-

ವಿದ್ಯಾವಿಭೂಷಣ, ವಿದ್ಯಾಸಾಗರ

**ಎಂ. ಪಿ. ಎಲ್. ಶಾಸ್ತ್ರಿ**

ಶ್ರೀ

ವೇ|| ಬ್ರ|| ಧಾಳಿ ನರಸಿಂಹ ಭಟ್ಟರು ನಮಗೆಲ್ಲಾ ಚಿಕ್ಕವರಾಗಿದ್ದಾಗಿ ರಭ್ಯದಿಂದಲೂ ಚನ್ನಾಗಿ ತಿಳಿದವರಾಗಿದ್ದಾರೆ. ಇವರು ಬಹಳ ನಿಷ್ಠರಾಗಿಯೂ ಅಹನ್ನೀಕಪರರಾಗಿಯೂ ಇದ್ದುಕೊಂಡು ವೇದಾಧ್ಯಯನಸಂಪನ್ನರಾಗಿ ಶಿಷ್ಯರಿಗೂ ಪಾಠಗಳನ್ನು ಹೇಳುತ್ತಿರುತ್ತಾರೆ ಇವರ ವಂಶೀಕರು ಋಗ್ವೇದಕ್ಕೆ ಆಧಾರಭೂತರಾಗಿದ್ದರು. ಇವರು ಋಗ್ವೇದ ಸೂತ್ರಕ್ಕೂ ಧರ್ಮಶಾಸ್ತ್ರಕ್ಕೂ ನಮ್ಮಗಳ ಆಚಾರವ್ಯವಹಾರಕ್ಕೂ ಸಹಸರಿಯಾಗಿ ಪ್ರಯೋಗದ ಅರ್ಥವನ್ನು ಪಾಮರಿಗೆ ಚನ್ನಾಗಿ ತಿಳಿಯುವಂತೆ ಬಹಳ ಕಷ್ಟಪಟ್ಟು ಬರೆದಿರುತ್ತಾರೆ. ಇವರು ಬರೆದಿರುವುದನ್ನು ಚನ್ನಾಗಿ ಓದಿಕೊಂಡು ಸಂತೋಷಪಟ್ಟಿದ್ದೇನೆ. ಇವರ ಶ್ರಮಕ್ಕೆ ದೇವರು ಒಳ್ಳೆಯದನ್ನು ಮಾಡುವುದಲ್ಲದೆ ಮುಂದೆಯೂ ಇದೇ ರೀತಿ ಪ್ರಚಾರ ಮಾಡುವಂತೆ ಬುದ್ಧಿ ಕೊಟ್ಟು ಕಾಪಾಡಲೆಂದು ಹಾರೈಸುತ್ತೇನೆ.

ವೇದಾರಣ್ಯ ವೇದವಿಶಾರದ<br>
ಎಸ್. ಶ್ರೀನಿವಾಸಶಾಸ್ತ್ರಿ<br>
ಋಗ್ವೇದ ವಿದ್ವಾನ್

# ಲೇಖಕರ ನುಡಿಗಳು

ಶ್ರೀ

## ಶ್ರೀ ಗಣೇಶ ಶಾರದಾ ನೃಸಿಂಹ ಗುರುಭ್ಯೋ ನಮಃ

ಪ್ರಪಂಚದಲ್ಲಿ "ಆರ್ಯಾವರ್ತಃ ಪುಣ್ಯ ಭೂಮಿಃ" ಎಂದು ನಮ್ಮ ಭರತಖಂಡವು ಪುಣ್ಯ ಅಥವಾ ಪವಿತ್ರವಾದ ದೇಶವೆಂದು ಪ್ರಖ್ಯಾತಿಯನ್ನು ಪಡೆದಿದೆ. ಈ ನಮ್ಮ ಪುಣ್ಯಭೂಮಿಯಲ್ಲಿ ಭಗವಂತನು ಅನೇಕವಾದ ಅವತಾರಗಳನ್ನು ತಾಳಿ ಎಲ್ಲೆಲ್ಲೂ ಬೆಳಗುತ್ತಿದ್ದಾನೆಂಬುದು ಸರ್ವ ವಿದಿತವಾಗಿದೆ. ಸಾಕ್ಷಾತ್ ಪರಮೇಶ್ವರನು ಶಂಕರಭಗವತ್ಪಾದರೆಂಬ ಹೆಸರಿನಿಂದ ಅವತರಿಸಿ ನಾಸ್ತಿಕರನ್ನು ನಿರ್ಮೂಲಗೊಳಿಸಿ, ಆಸ್ತಿಕರನ್ನುದ್ಧರಿಸಿರುವುದು ಸರಿಯಷ್ಟೆ. ಶ್ರೀ ಭಗವತ್ಪಾದರು "ವೇದೋನಿತ್ಯಮಧೀಯತಾಂ ತದುದಿತಂ ಕರ್ಮಸ್ವನುಷ್ಠೀಯತಾಂ" ಎಂದು ಹೇಳಿರುತ್ತಾರೆ. ಎಂದರೆ ವೇದವನ್ನು ನಿತ್ಯವೂ ಪಠಿಸುತ್ತಿರ ಬೇಕು–ಮತ್ತು ಅದರಲ್ಲಿ ಹೇಳಿರುವ ಕರ್ಮಗಳನ್ನು ಅನುಷ್ಠಾನ ಮಾಡಬೇಕು ಎಂಬ ಅಭಿಪ್ರಾಯವನ್ನು ಸೂಚಿಸಿರುತ್ತಾರೆ. ಈ ವೇದಗಳು ಯಾರಿಂದಲೂ ರಚಿತವಾದವುಗಳಲ್ಲ. ಇವಕ್ಕೆ ಸೃಷ್ಟಿ ಸ್ಥಿತಿ ಲಯಗಳಿಲ್ಲ. "ಸೃಷ್ಟ್ಯಾದೌ ಬ್ರಹ್ಮಣೋ ವೇದಾಃ ಮುಖೇಭ್ಯಶ್ಚ ವಿನಿರ್ಗತಾಃ । ತತ್ರೈವ ಚ ಲಯಂ ಯಾಂತಿ ಪ್ರಳಯೇ ಸಮುಪಸ್ಥಿತೇ" ಎಂದರೆ ಪ್ರಪಂಚ ಸೃಷ್ಟಿಯಾದಾಗಲೇ ವೇದಗಳೂ ಬಹಿರ್ಮುಖವಾಗುತ್ತವೆ. ಪ್ರಪಂಚವು ಮುಳುಗಿತೆಂದರೆ ವೇದಗಳೂ ಮುಳುಗುತ್ತವೆ ಎಂದು ವೇದಗಳ ಮಹಿಮೆಯನ್ನು ತಿಳಿಸಿದೆ. "ಮಂತ್ರೋ ಹೀನಃ ಸ್ವರತೋ ವರ್ಣತೋವಾ ಮಿಥ್ಯಾ ಪ್ರಯುಕ್ತೋ ನ ತಮರ್ಥ ಮಾಹ। ಸ ವಾಗ್ವಜ್ರೋ ಯಜಮಾನಂ ಹಿನಸ್ತಿ ಯಥೇಂದ್ರ ಶತ್ರು ಸ್ವರತೋಽಪರಾಧಾತ್" ಎಂಬ ಶಿಕ್ಷಾ ವಚನದಂತೆ ವೇದ ಮಂತ್ರಗಳಲ್ಲಿ ಸ್ವರ, ವರ್ಣ, ಇತ್ಯಾದಿಗಳಾವುವೂ ವ್ಯತ್ಯಾಸವಾಗುವಂತಿಲ್ಲ. ಯಥಾಸ್ಥಿತಿಯಲ್ಲಿಯೇ ಪಠಿಸಬೇಕು.

ಇಂತಹ ವೇದಗಳಲ್ಲಿ ಹೇಳಿರುವ ಕರ್ಮಗಳೆಂದರೆ ಗರ್ಭಾದಾನಾದಿ ಸಂಸ್ಕಾರಗಳು. ಈ ಸಂಸ್ಕಾರಗಳಲ್ಲಿ ವಿವಾಹವೆಂಬ ಕರ್ಮವೇ ಅತಿ ಮುಖ್ಯ

ವಾದುದು. ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ ಮತ್ತು ಯತಿ ಎಂಬ ನಾಲ್ಕು ಆಶ್ರಮಗಳಲ್ಲಿಯೂ ಗೃಹಸ್ಥಾಶ್ರಮವೇ ಅತಿ ಮುಖ್ಯವಾದುದು. ಬ್ರಹ್ಮಚಾರಿಯು ಗರ್ಭಾಷ್ಟಮದಲ್ಲಿ ಉಪನೀತನಾಗಿ ಗುರುಕುಲವಾಸಮಾಡಿ, ಸಮಸ್ತ ವಿದ್ಯೆಗಳನ್ನು ಕಲಿತು (ವೇದ, ಶಾಸ್ತ್ರ ವಿದ್ಯೆಗಳು) ಆ ಗುರುವಿಗೆ ಗುರುದಕ್ಷಿಣೆಯನ್ನು ಕೊಟ್ಟು ಕೃತಾರ್ಥನಾಗಿ ಆತನ ಅಪ್ಪಣೆಯಿಂದ ವ್ರತ ಚತುಷ್ಟಯ ವೆಂಬ ಕರ್ಮವನ್ನು ಮಾಡಿಕೊಂಡು ಆಮೇಲೆ ಸಮಾವರ್ತನವೆಂಬ ಕರ್ಮವನ್ನು ಮಾಡಿಕೊಂಡು ನಂತರ ವಿವಾಹವನ್ನು ಮಾಡಿಕೊಳ್ಳಬೇಕು. ವಿವಾಹವನ್ನು ಮಾಡಿಕೊಳ್ಳುವ ವರನು, "ಅಥೈತಾನ್ಯುಪಕಲ್ಪಯೀತ ಸಮಾವರ್ತ್ಸ್ಯಮಾನೇ ಮಣಿಂ, ಕುಂಡಲೇ, ವಸ್ತ್ರಯುಗ್ಮಂ, ಛತ್ರಮುಪಾನದ್ಯುಗ್ಮಂ, ದಂಡಂ, ಸ್ರಜಂ, ಉನ್ಮರ್ದನಂ, ಅನುಲೇಪನಂ, ಅಂಜನಂ, ಉಷ್ಣೀಷಂ ಇತ್ಯೇಕಾದಶದ್ರವ್ಯಾಣಿ ಸಂಪಾದ್ಯ ಎಂದು ಸೂತ್ರಕಾರರು ಹೇಳಿರುವುದರಿಂದ ಮೇಲೆ ತಿಳಿಸಿರುವ ಸ್ವರ್ಣಮಾಲೆ, ಕುಂಡಲ, ವಸ್ತ್ರ, ಛತ್ರಿ, ಪಾದರಕ್ಷೆ, ದಂಡ, ಪುಷ್ಪ, ಹರಿದ್ರಾ ಕುಂಕುಮ, ಅಂಜನ, ಪೇಟ. ಈ ಹನ್ನೊಂದು ಪದಾರ್ಥಗಳನ್ನೂ ತಾನೇ ಸ್ವತಃ ಸಿದ್ಧಪಡಿಸಿಕೊಂಡು ವಧೂಗೃಹಕ್ಕೆ ಹೋಗಿ ವಿವಾಹವನ್ನು ಮಾಡಿಕೊಳ್ಳಬೇಕು.

ಈ ವಿವಾಹವನ್ನು ಮಾಡಿಕೊಂಡು ಸಂತಾನವನ್ನು ಪಡೆದು ಸಪತ್ನೀಕನಾಗಿ ಗೃಹಸ್ಥಾಶ್ರಮ ಯೋಗ್ಯವಾದ ಸ್ಮಾರ್ತ ಮತ್ತು ಶ್ರೌತ ಕರ್ಮಗಳನ್ನು ಮಾಡಿ ಇಹಪರಗಳೆರಡರಲ್ಲಿಯೂ ಸೌಖ್ಯವನ್ನು ಪಡೆದು ಬ್ರಹ್ಮಸಾಯುಜ್ಯವನ್ನು ಪಡೆಯುವುದರಲ್ಲಿ ಸಂದೇಹವೇ ಇಲ್ಲ. ಇದೇ ನಮ್ಮ ವೇದದಸಿದ್ಧಾಂತ. ಇಂತಹ ಪವಿತ್ರವಾದ ವಿವಾಹವನ್ನು ಮಾಡಿಕೊಳ್ಳುವ ವಿಧಾನ, ಮತ್ತು ಮಂತ್ರಾರ್ಥಗಳನ್ನು ಬರೆದು ಹೊರಪಡಿಸಿದರೆ ಸರ್ವಜನೋಪಕಾರವಾಗುತ್ತೆಂದು ನಮ್ಮ ಶಿಷ್ಯವರ್ಗದವರು ಬಹಳವಾಗಿ ಅಪೇಕ್ಷಿಪಟ್ಟಿದ್ದರಿಂದ ಅವರ ಇಚ್ಛಾನುಸಾರ ಯಥಾಮತಿಯಾಗಿ ನೃಸಿಂಹ ಪ್ರಯೋಗ ಪಾರಿಜಾತ ರೀತ್ಯಾ ಕನ್ನಡಾರ್ಥವನ್ನು ಬರೆದು ಮಂತ್ರಾರ್ಥಗಳನ್ನೂ ಸಹ ಬರೆದಿರುತ್ತೇನೆ. ವೇದಭಾಷ್ಯ, ಬ್ರಾಹ್ಮಣಭಾಷ್ಯ, ಗೃಹ್ಯ ಸೂತ್ರ, ಬ್ರಹ್ಮ ಕರ್ಮಸಮುಚ್ಚಯ, ಧರ್ಮ ಸಿಂಧು, ಷೋಡಶಕರ್ಮಕಾಂಡಗಳ ಆಧಾರದ ಮೇಲೆ ಬರೆದಿರುತ್ತೇನೆ.

ಈ ನನ್ನ ಲೇಖನವನ್ನು ತಿರುಪತಿ ತಿರುಮಲೈ ದೇವಸ್ಥಾನದ ಟ್ರಸ್ಟ್ ನವರು ಇದರ ಮುದ್ರಣ ವೆಚ್ಚಕ್ಕಾಗಿ ಧನ ಸಹಾಯ ಮಾಡಿರುತ್ತಾರೆ. ಇವರಿಗೆ ನನ್ನ ಅನೇಕ ಧನ್ಯವಾದಗಳು. ಈ ಪುಸ್ತಕಕ್ಕೆ ಮುನ್ನುಡಿ ಬರೆದುಕೊಟ್ಟ ವೇ||ಬ್ರಂ||ಶ್ರೀ ಬಿ. ರಾಮ ಭಟ್ಟರಿಗೂ ಮತ್ತು ಇದಕ್ಕೆ ಪ್ರೋತ್ಸಾಹಿಸಿದ ಹಾಗೂ ಅಭಿಪ್ರಾಯ ನಿವೇದನೆ ಮಾಡಿದ ಎಲ್ಲರಿಗೂ ಈ ಪುಸ್ತಕವನ್ನು ವಿಶೇಷ ಆಸಕ್ತಿವಹಿಸಿ ಮುದ್ರಿಸಿ ಕೊಟ್ಟ ಶ್ರೀ ಗುರುಪ್ರಸಾದ್ ಪ್ರಿಂಟರ್ಸ್‌ನ ಮಾಲೀಕರಾದ ಬಿ. ಕೃಷ್ಣಭಟ್ಟರವರಿಗೂ ಮತ್ತು ಕುಟುಂಬದವರಿಗೂ ನನ್ನ ನೆಚ್ಚಿನ ಶಿಷ್ಯನಾದ ಚಿ|| ಸ|| ಸತ್ಯನಾರಾಯಣ ಶಾಸ್ತ್ರಿಯವರಿಗೂ ಇದಕ್ಕೆ ಸಹಕರಿಸಿದ ಎಲ್ಲಾ ಶಿಷ್ಯವರ್ಗದವರಿಗೂ ಭಗವಂತನು ಆಯುರಾರೋಗ್ಯ ಐಶ್ವರ್ಯಾದಿಗಳನ್ನು ಕೊಟ್ಟು ಕಾಪಾಡಲೆಂದು ಪ್ರಾರ್ಥಿಸುತ್ತೇನೆ.

ಗ್ರಾಹಕರು ಈ ನನ್ನ ಲೇಖನಕ್ಕೆ ಪ್ರಾಶಸ್ತ್ಯವನ್ನು ಕೊಟ್ಟು ಹಂಸಕ್ಷೀರ ನ್ಯಾಯದಂತೆ ಇದರಲ್ಲಿರುವ ಲೋಪದೋಷಗಳನ್ನು ಬಿಟ್ಟು ಗುಣಗ್ರಹಣ ಮಾಡಿ ನನ್ನನ್ನು ಕೃತಾರ್ಥನನ್ನಾಗಿ ಮಾಡುತ್ತೀರೆಂದು ವಿಜ್ಞಾಪಿಸುತ್ತೇನೆ.

ಮನೆ ವಿಳಾಸ :
582, ಎರಡನೇ ರಸ್ತೆ,
ಹನುಮಂತನಗರ,
ಬೆಂಗಳೂರು–560 019

ರಾಜ್ಯಪ್ರಶಸ್ತಿ ವಿಜೇತ
ಋಗ್ವೇದ ಭೂಷಣ
ಋಗ್ವೇದ ವಿಚಕ್ಷಣ
ಋಗ್ವೇದ ಶಿಖಾಮಣಿ
ಋಗ್ವೇದ ವಿಶಾರದ
ವೇದಸಿಂಧು
**ಥಾಳಿ ಲಕ್ಷ್ಮೀನರಸಿಂಹ ಭಟ್ಟ**
ಋಗ್ವೇದ ಅಧ್ಯಾಪಕ
ಶ್ರೀ ಶೃಂಗೇರಿ ಶಂಕರಮಠ
ಪೂರ್ಣಪ್ರಜ್ಞ ವಿದ್ಯಾಪೀಠ
ಬೆಂಗಳೂರು

## ಭಾಗ 1

# ಸಮಾವರ್ತನೆ

ಶ್ರೀ ಗಣೇಶ ಶಾರದಾ ನರಸಿಂಹ ಗುರುಭ್ಯೋನಮಃ ॥

**ಸ್ಮೃತಿರೂಪೇಣಾಪ್ಯಾಚಾರ್ಯಃ ॥ ಸಮಾವರ್ತನಂ**

ಪಠಿತ್ವಾ ಚತುರೋ ವೇದಾನ್ತ್ರೀನ್ ದ್ವೌವೈಕಮಥಾಽಪಿ ವಾ।
ತೋಷಯೇದ್ದಕ್ಷಿಣಾಭಿಸ್ತು ಗುರುಂ ಭಕ್ತ್ಯಾ ವಿಚಕ್ಷಣಃ ॥
ಧನಂ ಪಿತ್ರಾದಿ ಬಂಧುಭ್ಯ ಸ್ಸಮಾಹೃತ್ಯಾಽಥವಾಪರಾತ್
ರಾಜಭ್ಯೋವಾ ಗುರುಂ ಸಮ್ಯಕ್ತೋಷಯೇತ್ ಸ್ನಾತಕೋವ್ರತೀ ॥

**ಯಾಜ್ಞವಲ್ಕ್ಯೋಽಪಿ** ॥ ಗುರುವೇ ತು ವರಂ ದತ್ವಾ ಸ್ನಾಯೀತ ತದನುಜ್ಞಯಾ ॥

**ಕೂರ್ಮಪುರಾಣೇಽಪಿ**

ವೇದಂ ವೇದೌ ತಥಾ ವೇದಾ‍ ವೇದಾನ್ವಾ ಚತುರೋದ್ವಿಜಃ ।
ಅಧೀತ್ಯ ಚಾಧಿಗಮ್ಯಾರ್ಥಂ ತತಃಸ್ನಾಯಾದ್ದ್ವಿಜೋತ್ತಮಃ ॥

ಬ್ರಹ್ಮಚಾರಿಯು ಗುರುಕುಲದಲ್ಲಿ ವೇದಾಧ್ಯಯನವನ್ನು ಮಾಡಿ ಆ ಗುರುವಿಗೆ ಗುರುದಕ್ಷಿಣೆಯನ್ನು ಕೊಟ್ಟು ಅವನನ್ನು ಸಂತೋಷಪಡಿಸಬೇಕು ಎಂಬುದಾಗಿ ಮಹರ್ಷಿಗಳೆಲ್ಲರೂ ಹೇಳಿರುತ್ತಾರೆ.

ಸ್ನಾತಕನೆಂದರೆ ವೇದಾಧ್ಯಯನವೆಂಬುದೇ ಸ್ನಾನ. ಅದರಿಂದ ಪರಿಶುದ್ಧನಾದವನೇ ಸ್ನಾತಕನು.

ಗುರುವಿಗೆ ಕೊಡುವ ದಕ್ಷಿಣೆಯೇನೆಂಬುದನ್ನು ಮನುವು ಹೇಳಿರುತ್ತಾನೆ.

ಅಪೂರ್ವಂ ಗುರವೇ ಕಿಂಚಿದುಪಕುರ್ವೀತ ಧರ್ಮವಿತ್ ।
ಸ್ವಾಸ್ಯಂಸ್ತು ಗುರುಣಾಜ್ಞಪ್ತಶ್ಶಕ್ತ್ಯಾ ಗುರ್ವರ್ಥಮಾಹರೇತ್
ಕ್ಷೇತ್ರಂ ಹಿರಣ್ಯಂ ಗಾಮಶ್ವಂ ಛತ್ರೋಪಾನಹಮಂತತಃ
ಧಾನ್ಯವಾಸಾಂಸಿ ಶಾಕಂ ವಾ ಗುರುವೇ ಪ್ರೀತಿಮಾಹರೇದಿತಿ ॥

ತಂದೆ ತಾಯಿಗಳು, ಬಂಧುಗಳು, ರಾಜರು ಅಥವಾ ಬೇರೆಯಾರಿಂದಲಾದರೂ ಗುರುದಕ್ಷಿಣಾರ್ಥವಾಗಿ ಯಾಚಿಸಿ, ಗುರುವಿಗೆ ಕೊಟ್ಟು ತೃಪ್ತಿಪಡಿಸಬೇಕು. ಭೂಮಿ, ಹಿರಣ್ಯ, ಗೋವು, ಕುದುರೆ, ಛತ್ರಿ, ಪಾದುಕೆ, ಧಾನ್ಯ, ವಸ್ತ್ರ, ತರಕಾರಿ, ಈ ಮೇಲ್ಕಂಡ ಯಾವ ಪದಾರ್ಥಗಳನ್ನಾದರೂ ಗುರ ದಕ್ಷಿಣೆಯಾಗಿ ಕೊಟ್ಟು ಗುರುವನ್ನ ತೃಪ್ತಿಪಡಿಸಬೇಕು.

ಅಯಂ ಪರೋ ಗುರುಪ್ರೀತ್ಯರ್ಥೋನತು ವಿದ್ಯಾ ವಿಷ್ಕ್ರಯಾರ್ಥಃ ಈ ಗುರುದಕ್ಷಿಣೆಯು ಗುರುಪ್ರೀತಿಗಾಗಿಯೇ ವಿನಾ ವಿದ್ಯೆಯನ್ನು ಮಾರುವುದಕ್ಕಲ್ಲ.

ವೇದಾಕ್ಷರಸ್ಯ ಮೂಲ್ಯಾಸಂಭವತ್ವಾತ್ ॥
ವೇದ ವಿದ್ಯೆಗೆ ಬೆಲೆಯನ್ನು ಕಟ್ಟುವುದಕ್ಕೆ ಸಾಧ್ಯವೇ ಇಲ್ಲ.

ತಥಾ ಚ ಛಂಧೋಗ ಶ್ರುತಿಃ :

ಯದ್ಯಪ್ಯಸ್ಮಾ ಇಳಾಮದ್ಭಿಃ ಪರಿಗೃಹೀತಾಂ ಧನೇನ ಪೂರ್ಣಾಂ
ದದ್ಯಾದೇತದೇವ ತತೋ ಭೂಯ ಇತಿ ॥

ತಾಪನೀಯು ಶ್ರುತಿರಪಿ :

ಸಪ್ತದ್ವೀಪವತೀ ಭೂಮಿರ್ದಕ್ಷಿಣಾರ್ಥಂ ನ ಕಲ್ಪಿತಾ

ಸಪ್ತದ್ವೀಪಗಳಿಂದ ಕೂಡಿದ ಭೂಮಿಯನ್ನು ದಾನ ಮಾಡಿದರೂ ಗುರುದಕ್ಷಿಣೆಗೆ ಸರಿಯಾಗಲಾರದು.

ಹಾರೀತೋsಪಿ :

> ಏಕಮಪ್ಯಕ್ಷರಂ ಯತ್ತು ಗುರುಶ್ಶಿಷ್ಯೇನಿವೇದಯೇತ್ ।
> ಪೃಥಿವ್ಯಾಂ ನಾಸ್ತಿ ತದ್ದ್ರವ್ಯಂ ಯದ್ದತ್ವಾತ್ವನೃಣೀಭವೇದಿತಿ ॥

ಗುರುವಾದವನು ಶಿಷ್ಯನಿಗೆ ಒಂದು ಅಕ್ಷರವನ್ನು ಉಪದೇಶಮಾಡಿದರೂ ಕೂಡ ಆ ಋಣವನ್ನು ಕಳೆದುಕೊಳ್ಳಲು ಅದಕ್ಕೆ ಸರಿಸಮನಾದ ಪದಾರ್ಥವು ಮತ್ತೊಂದಿಲ್ಲ.

ಸಮಾವರ್ತನೆಗೆ ಸಿದ್ಧಪಡಿಸಿಕೊಳ್ಳಬೇಕಾದ ಪದಾರ್ಥಗಳನ್ನು ಬ್ರಹ್ಮಚಾರಿಯೇ ಸ್ವತಃ ಸಂಪಾದಿಸಿ ಸಿದ್ಧಪಡಿಸಿಕೊಳ್ಳಬೇಕು. ಆ ಪದಾರ್ಥಗಳು ಯಾವುವೆಂದರೆ :

> ಇದಮತ್ರಗೃಹ್ಯಂ-ಅಥೈತಾನ್ಯುಪಕಲ್ಪಯೀತ। ಸಮಾವರ್ತ್ಯಮಾನೋ ಮಣಿಂ ಕುಂಡಲೇ ವಸ್ತ್ರಯುಗಂ ಛತ್ರಮುಪಾನದ್ಯುಗಂ ದಂಡಂ ಸ್ರಜ ಮುನ್ಮರ್ದನಂ ಅನುಲೇಪನ ಮುಷ್ಣೀಷಮಿತ್ಯಾತ್ಮನೇ-
> ಚಾಚಾರ್ಯಾಯ ಚ ।

ಬಂಗಾರದ ಸರ, ಕಿವಿಗಳಿಗೆ ಕುಂಡಲಗಳು, ಉಡುವುದಕ್ಕೆ ಹೊದೆಯುವುದಕ್ಕೂ ಸಹ ಜೊತೆ ಪಂಚೆ, ಛತ್ರಿ ಪಾದರಕ್ಷೆ, ಬೆತ್ತ, ಪುಷ್ಪ, [illegible]ವಕಪ್ಪು, ಅರಿಶಿನ, ಕುಂಕುಮ, ಪೇಟ ಎಂಬುದಾಗಿ ಹನ್ನೊಂದು ಪದಾರ್ಥಗಳನ್ನು ಸಿದ್ಧಪಡಿಸಿಕೊಂಡು ಸಮಾವರ್ತನೆಯನ್ನು ಮಾಡಿಕೊಳ್ಳಬೇಕು.

ಮೊದಲು ಬ್ರಹ್ಮಚಾರಿಯಾದವನು ಬ್ರಹ್ಮಚರ್ಯ ಲೋಪದೋಷ ಪರಿಹಾರಾರ್ಥವಾಗಿ (ಕಾಲದಲ್ಲಿ ಸ್ನಾನ ಸಂಧ್ಯಾದ್ಯನುಷ್ಠಾನ ಲೋಪ) ಕೃಚ್ಛ್ರಾಚರಣೆಯನ್ನು ಮಾಡಿ ಅಗ್ನಿಯಲ್ಲಿ ಪ್ರಧಾನ ಹೋಮವನ್ನು ಮಾಡಬೇಕು.

ಆಮೇಲೆ ಬಿಸಿನೀರು ತಣ್ಣೀರು ಎರಡನ್ನೂ ಒಟ್ಟಿಗೆ ಸೇರಿಸಿ ಬ್ರಹ್ಮಾ

ಸ್ನಾತಕನ ತಲೆಯ ಮೇಲೆ ಉಷ್ಣೇನವಾಯ ಉದಕೇನೇಹಿ । ಎಂದರೆ ಎಲೈ ವಾಯುವೇ ಬಿಸಿನೀರಿನೊಡನೆ ಇಲ್ಲಿಗೆ ಬಾ ಎಂದು ಹಾಕಬೇಕು ಆಗ ಸ್ನಾತಕನು ಬೇರೊಂದು ಪಾತ್ರೆಯಿಂದ ಆ ನೀರನ್ನು ಶೇಖರಿಸಿಕೊಂಡು ಸ್ವಲ್ಪ ಮೊಸರಿನ ಕರಣೆಯನ್ನು ಚೂರು ಅರಿಶಿನದ ಪುಡಿಯನ್ನೂ ಹಾಕಿ ಕಲಸಿ ಎಡಕಿವಿಯ ಭಾಗ ದಿಂದ ಬಲಕಿವಿಯ ವರೆಗೂ "ಅದಿತಿಶ್ಮಶ್ರೂಣಿವಪತ್ವಾಪಉಂದಂತು ವರ್ಚಸೇ", ಇವನ ಮುಖದ ಕಾಂತಿಗಾಗಿ ನೀರು ಮುಖದ ಕೂದಲುಗಳನ್ನು ನೆನೆಸಲಿ ಅದಿತಿಯು ಮುಖದ ಕೂದಲುಗಳನ್ನು ಕತ್ತರಿಸಲಿ. ನಂತರ ಬ್ರಹ್ಮನು 'ತನ್ನ ಕೈಯಲ್ಲಿರುವ ಇಪ್ಪತ್ತೊಂದು ದರ್ಭೆಗಳಲ್ಲಿ ಮೂರನ್ನು ಬೇರೊಬ್ಬ ಬ್ರಹ್ಮಚಾರಿಯ ಕೈಗೆ ಕೊಡಬೇಕು. ಆಗ ಆ ಬ್ರಹ್ಮಚಾರಿಯು ಈ ಮೂರು ದರ್ಭೆಗಳನ್ನು ಸ್ನಾತಕನ ಬಲಕಿವಿಯ ಹತ್ತಿರ ಪಶ್ಚಿಮಾಗ್ರವಾಗಿಟ್ಟು ತಾಮ್ರದ ಕತ್ತಿಯಿಂದ ಓಷಧೇ ತ್ರಾಯಸ್ವಮಾಂ । ಸ್ವಧಿತೇ ಮಾಮಾಹಿಂಸೀಃ । ಎಲೈ ಓಷಧಿಯೇ ನನ್ನನ್ನು ಕಾಪಾಡು ನನ್ನನ್ನು ಹಿಂಸಿಸಬೇಡ

"ಯೇನಾऽವಪತ್ಸವಿತಾಕ್ಷುರೇಣ ಸೋಮಸ್ಯರಾಜ್ಞೋ ವರುಣಸ್ಯ ವಿದ್ವಾನ್ ।
ತೇನ ಬ್ರಹ್ಮಾಣೋವಪತೇದಂ ಮಮ ಆಯುಷ್ಮಾನ್ ಜರದಷ್ಟಿರ್ಭೂಯಾಸಂ॥"

"ಯಾವ ಕತ್ತಿಯಿಂದ ರಾಜನಾದ ಸೋಮನಿಗೆ ವರುಣನಿಗೆ ಕ್ಷೌರ ಕರ್ಮದಲ್ಲಿ ಸಮರ್ಥನಾದ ಸವಿತೃವು ವಪನವನ್ನು ಮಾಡಿದನೋ ಆ ಕತ್ತಿ ಯಿಂದ ಎಲೈ ಬ್ರಾಹ್ಮಣರೇ ವಪನವನ್ನು ಮಾಡಿರಿ. ಈ ವಪನ ಕರ್ಮದಿಂದ ವೃದ್ಧಾಪ್ಯಪರ್ಯಂತ ನಾನು ಆಯುಷ್ಮಂತನಾಗುವೆನು" ಎಂದು ಸ್ನಾತಕನು ಹೇಳುವನು. ಬೇರೆ ಬ್ರಹ್ಮಚಾರಿಯು ಈ ಸ್ನಾತಕನ ಕೂದಲೊಂದಿಗೆ ದರ್ಭೆ ಯನ್ನು "ಪ್ರಚ್ಛಿದ್ಯಪ್ರಚ್ಛಿದ್ಯಪ್ರಾಗಗ್ರಾನ್ ದರ್ಭಾನ್ ಶಮೀಪರ್ಣೈಸ್ಸಹ ಆತ್ಮನೇ ಪ್ರಯಚ್ಛತಿ. ತಾನಾನಡುಹೇ ಗೋಮಯೇ ನಿದಧಾತಿ" ಕತ್ತರಿಸಿ ಆ ಕತ್ತರಿಸಿದ ದರ್ಭೆಯನ್ನು ಕೂದಲನ್ನೂ ಬನ್ನೀ ಎಲೆಯೊಂದಿಗೆ ಸ್ನಾತಕನ ಕೈಗೆ ಕೊಡ ಬೇಕು. ಸ್ನಾತಕನು ತನ್ನ ಮುಂದೆ ಇಟ್ಟಿರುವ ಸಗಣಿಯ ನಾಲ್ಕು ಕುಡಿಕೆ ಗಳಲ್ಲಿ ಹಾಕಬೇಕು.

ಈ ರೀತಿ ಬಲಕಿವಿಯ ಹತ್ತಿರ ನಾಲ್ಕು ಸಲ ಕತ್ತರಿಸಬೇಕು. ಎರಡನೇ ಸಲ ಮಂತ್ರವು ಮಾತ್ರ ವ್ಯತ್ಯಾಸ.

ಓಷಧೇ ತ್ರಾಯಸ್ವ ಮಾಂ । ಸ್ವಧಿತೇಮಾಮಾಹಿಂಸೀಃ ।
ಯೇನ ಧಾತಾ ಬೃಹಸ್ಪತೇರಗ್ನೇರಿಂದ್ರಸ್ಯ ಚಾಯುಷೇಽವಪತ್ ।
ತೇನಮ ಆಯುಷೇ ವಪಾಮಿ ಸುಶ್ಲೋಕ್ಯಾಯಸ್ವಸ್ತಯೇ ॥

ಯಾವ ಕತ್ತಿಯಿಂದ ಬ್ರಹ್ಮನು ಬೃಹಸ್ಪತಿ, ಅಗ್ನಿ, ಇಂದ್ರರುಗಳ ಆಯುಷ್ಯಾಭಿವೃದ್ಧಿಗಾಗಿ ವಪನವನ್ನು ಮಾಡಿದನೋ ಆ ಕತ್ತಿಯಿಂದ ನನ್ನ ಆಯುಷ್ಯಾಭಿವೃದ್ಧಿಗೋಸ್ಕರ ಕೀರ್ತಿವಂತನಾಗುವುದಕ್ಕೂ ಮಂಗಳಕರ ಕ್ಕೋಸ್ಕರವೂ ವಪನವನ್ನು ಮಾಡಿಕೊಳ್ಳುತ್ತೇನೆ.

ಯೇನ ಭೂಯಶ್ಚರಾತ್ಯಾಂ ಜ್ಯೋಕ್ಚಪಶ್ಯಾಮಿ ಸೂರ್ಯಂ ।
ತೇನ ಮ ಆಯುಷೇ ವಪಾಮಿ ಸುಶ್ಲೋಕ್ಯಾಯ ಸ್ವಸ್ತಯೇ ॥

ಯಾವ ಕತ್ತಿಯಿಂದ ವಪನ ಮಾಡಲ್ಪಟ್ಟ ನಾನು (ಸ್ನಾತಕನು) ಹೆಚ್ಚಾಗಿ ಸಂಚರಿಸುವೆನು ಅನೇಕ ಕಾಲ ಸೂರ್ಯನನ್ನು ನೋಡುವೆನೋ ಅಂತಹ ಕತ್ತಿಯಿಂದ ನನ್ನ ಆಯುಷ್ಯಾಭಿವೃದ್ಧಿಗೂ ಕೀರ್ತಿಗೂ ಮಂಗಳಕರಕ್ಕೂ ಸಹ ವಪನವನ್ನು ಮಾಡಿಕೊಳ್ಳುತ್ತೇನೆ.

ನಾಲ್ಕನೇ ಸಲ ಕೇಶಚ್ಛೇದನ ಕಾಲದಲ್ಲಿ ಹಿಂದಿನ ಮೂರು ಮಂತ್ರಗಳನ್ನೂ ಹೇಳಬೇಕು.

ಆಮೇಲೆ ಎಡಕಿವಿಯ ಹತ್ತಿರ ಮೂರಾವರ್ತಿ ಮಾತ್ರ ಒಂದೊಂದು ಮಂತ್ರವನ್ನು ಹೇಳುತ್ತಾ ಕೇಶಚ್ಛೇದನವನ್ನು ಮಾಡಬೇಕು.

ಯತ್ ಕ್ಷುರೇಣ ಮರ್ಚಯತಾ ಸುಪೇಶಸಾ ವಪ್ತಾವಪಸಿ ಶ್ಮಶ್ರೂಣಿ
ಶುಂಧಿ ಶಿರೋಮುಖಂಮಾಮಾಯುಃ ಪ್ರಮೋಷೀಃ

ಯಾವ ಹಿಂಸೆಯನ್ನುಂಟುಮಾಡುವ ಎಂದರೆ ಕತ್ತಿಯು ಚೂಪಾಗಿರುವುದರಿಂದ ಒಳ್ಳೆಯ ರೂಪವುಳ್ಳ ಪ್ರಕಾಶಮಾನವಾದ ಕತ್ತಿಯಿಂದ ಕಪೋಲಗಳನ್ನು ವಪನ ಮಾಡುತ್ತೀಯೆ. ನನ್ನ ಶಿರಸ್ಸನ್ನು ಕತ್ತರಿಸಬೇಡ. ನನ್ನ ಆಯುಸ್ಸನ್ನು ಕಳೆಯಬೇಡ. ಎಂದು ಕತ್ತಿಯನ್ನು ತನ್ನ ಬೆರಳುಗಳಿಂದ ಸವರುತ್ತಾ ಪ್ರಾರ್ಥಿಸಬೇಕು.

ನಾಪಿತಮಾಹೂಯ ಶೀತೋಷ್ಣಾಭಿರದ್ಭಿರಬರ್ಥಂಕುರ್ವಾಣೋಽಕ್ಷು
ಣ್ವನ್ ಕುಶಲೀಕೇಶಶ್ಮಶ್ರುಲೋಮನಖಾನ್ಯುದಕ್ಸಂಸ್ಥಾನಿ ಕುರ್ವಿತಿ
ಪ್ರೈಷೇಣಾನುಶಾಸ್ಯ| ತತ್ಪ್ರೈಷಾರ್ಥಂ ಚಾವಬೋಧ್ಯ |
ತೇನ ನಾಪಿತೇನ ಪೂರ್ವಸೇಕಾವಶಿಷ್ಟೆ
ಶ್ಯೀತೋಷ್ಣಾಭಿರದ್ಭಿರಗ್ರಪಾಣಿನಾಽರ್ದ್ರೀಕೃತ್ಯ| ಕೇಶಶ್ಮಶ್ರು
ಲೋಮನಖಾನ್ಯುದಕ್ಸಂಸ್ಥಾನಿ ವಾಪಯಿತ್ವಾ । ತಚ್ಚವ್ರೀಹ್ಯಾದಿಪಾತ್ರ
ಚತುಷ್ಟಯಂ ನಾಪಿತಾಯ ದದ್ಯಾತ್ ॥

ಈ ರೀತಿಯಾಗಿ ಮಂತ್ರೋಕ್ತವಾಗಿ ದಿಗ್ವಪನವೆಂಬ ಕರ್ಮವನ್ನು ಮಾಡಿಕೊಳ್ಳಬೇಕು.

ನಾಪಿತನನ್ನು ಕರೆದು ತಣ್ಣೀರು ಬಿಸಿನೀರಿನಿಂದ ಬೆರೆದ ಸಮಧಾತುವಾದ ನೀರಿನಿಂದ ಕೂದಲನ್ನು ಚನ್ನಾಗಿ ನೆನೆಸಿ ಗಾಯವಾಗದಂತೆ ಸುಖವಾಗಿ ಕ್ಷುರ ಕರ್ಮವನ್ನು ಮಾಡೆಂದು ಅವನಿಗೆ ತಿಳಿಸಿ ಅವನಿಂದ ವಪನ ಕರ್ಮವನ್ನು ಮಾಡಿಸಬೇಕು.

ಆದರೆ ಈ ಸಮಾವರ್ತನಾಂಗವಾದ ಕ್ಷೌರ ಕರ್ಮವು ಪ್ರಯೋಗದಲ್ಲಿ ಹೇಳಲ್ಪಟ್ಟಿದೆ. ಶಿಷ್ಟಾಚಾರದಲ್ಲಿಲ್ಲ.

ಈ ಸಮಯದಲ್ಲಿ ಕನ್ಯಾದಾತನು ವರನಿಗೆ ಕೊಡುವ ಮಂಗಳ ದ್ರವ್ಯಗಳ ಸಮೇತನಾಗಿ ಬಂದು ಸಂಕಲ್ಪವನ್ನು ಮಾಡಿ ವರನಿಗೆ ಮೊದಲು ಒಂದು ಜೊತೆ ಪಂಚೆಯನ್ನು ಓದಿಸಿಕೊಡುತ್ತಾನೆ.

'ಏಕಂ ವಸ್ತ್ರಂ ಸಮಂತ್ರಂ ಪರಿಧಾಯ ಅನ್ಯದ್ವಸ್ತ್ರಂ ಪ್ರಾವೃಣುಯಾತ್ ॥'

ಎಂದರೆ ವರನು ಮಂತ್ರಪೂರ್ವಕವಾಗಿ ಒಂದು ವಸ್ತ್ರವನ್ನುಟ್ಟು ಮತ್ತೊಂದನ್ನು ಹೊದೆಯಬೇಕು.

"ದ್ವಿರಾಚಮ್ಯ" ವಸ್ತ್ರಧಾರಣೆಯಾದಮೇಲೆ ಎರಡಾವರ್ತಿ ಆಚಮನ ವನ್ನು ಮಾಡಬೇಕು.

ಪಾಣಿನಾಂಜನಮಾದಾಯ, ಅ್ಮಾಸನ್ತೇಜೋऽಸಿ ಚಕ್ಷುರ್ಮೇಪಾಹಿ'ತಿ' ಮಂತ್ರಾವೃತ್ತ್ಯಾ ಸವ್ಯದಕ್ಷಿಣ ಚಕ್ಷುಷೀ ಕ್ರಮೇಣಾಜ್ಯಾ ಎಂದು ಕಪ್ಪನ್ನು ಕುರಿತು ಒಳ್ಳೆಯ ಪಾಷಾಣದ ಸಾರಭೂತವಾಗಿದ್ದೀಯೆ ಅಂತಹ ನೀನು ನನ್ನ ಎರಡು ಕಣ್ಣುಗಳನ್ನೂ ರಕ್ಷಿಸು ಎಂದು ಕನ್ಯೆಯ ತಾಯಿಯ ಕೈಯಿಂದ ವರನ ಎಡಗಣ್ಣಿಗೆ ಮೊದಲು ಹಚ್ಚಿಸಿ ಆಮೇಲೆ ಬಲಗಣ್ಣಿಗೆ ಹಚ್ಚಿಸಿ ಕೊಳ್ಳಬೇಕು.

"ಅಶ್ಮನಸ್ತೇಜೋऽಸಿ ಶ್ರೋತ್ರಂ ಮೇ ಪಾಹಿ" ಇತಿ ಅನೇನ ಕುಂಡಲಾಭ್ಯಾಂ ದಕ್ಷಿಣ ಸವ್ಯ ಶ್ರೋತ್ರೇ ಅಲಂಕೃತ್ಯ

ಎಲೈ ಕುಂಡಲವೇ ! ಮಣಿರೂಪವಾದ ಕಲ್ಲಿನ ಸಾರಭೂತವಾಗಿದ್ದೀಯೆ. ಅಂತಹ ನೀನು ನನ್ನ ಎರಡು ಕಿವಿಗಳನ್ನೂ ರಕ್ಷಿಸು.

"ಕುಂಕುಮಾದ್ಯನುಲಿಪ್ತಾಭ್ಯಾಂ ಪೂರ್ವಂಮುಖಂ

ಪಶ್ಚಾದಿತರಾಂಗಾನ್ಯುಪಲಿಪ್ಯ"

ಮೊದಲು ಕೆನ್ನೆಗಳಿಗೆ, ಕೈಕಾಲುಗಳಿಗೆ ಅರಿಶಿನವನ್ನು ಹಚ್ಚಿಸಿಕೊಳ್ಳ ಬೇಕು. ನಂತರ ಹಣೆಗೆ ಕುಂಕುಮವನ್ನಿಡಿಸಿಕೊಳ್ಳಬೇಕು.

ಅನಾರ್ತಾರ್ಸ್ಯನಾಕ್ತೋऽಹಂ" ಭೂಯಾಸಂ" ಇತ್ಯನೇನ ಶಿರಸಿಸ್ರಜಂಧಾತ್ವಾ.

ಎಲೈ ಪುಷ್ಪವೇ! ನೀನು ದುಃಖವಿಲ್ಲದ್ದಾಗಿದ್ದೀಯೆ. ನಾನು ಕೂಡ ನಿನ್ನನ್ನು ನನ್ನ ಶಿರಸ್ಸಿನಲ್ಲಿ ಧರಿಸಿದ್ದರಿಂದ ನಿನ್ನಂತೆ ದುಃಖವಿಲ್ಲದೇ ಸುಖಿಯಾಗುವೆನು.

ಇಲ್ಲಿ ಒಂದು ವಿಶೇಷವೇನೆಂದರೆ, ವರನ ಕೊರಳಿಗೆ ಹೂವಿನ ಹಾರವನ್ನು ಹಾಕಬಾರದೆಂದು ಸೂತ್ರಕಾರರು ಹೇಳುತ್ತಾರೆ.

ಅನಾರ್ತಾಽಶ್ಯನಾರ್ತೋಽಹಂ ಭೂಯಾಸಮಿತಿಸ್ರಜಮಪಿ ಬಧ್ನೀತನ
ಮಾಲೋಕ್ತಾಂ । ಮಾಲೇತಿಚೇದ್ಬ್ರೂಯುಸ್ಸ್ರಗಿತ್ಯಭಿಧಾಪಯೀತ ।

ಮಾಲೆಯೆಂದು ಹಾಕಿದರೂ ಕೂಡ ಅದು ಪುಷ್ಪವೆಂದೇ ಭಾವಿಸಬೇಕು. ಆದರೆ ಹಾರವನ್ನು ಹಾಕುವುದು ರೂಢಿಗೆ ಬಂದಿದೆ.

"ದೇವಾನಾಂ ಪ್ರತಿಷ್ಠೇಸ್ಥಸ್ಸರ್ವತೋಮಾಪಾತಂ" ಇತಿ ಮಂತ್ರೇಣ ಚರ್ಮಮಯ್ಯಾವುಪಾನಹೌದಕ್ಷಿಣಸವ್ಯಾಭ್ಯಾಂ ಪಾದಾಭ್ಯಾಮಾರುಹ್ಯ.

ಎಲೈ ಪಾದರಕ್ಷೆಗಳಿರಾ! ನೀವಿಬ್ಬರೂ ದೇವತೆಗಳಿರುವ ಸ್ಥಳವನ್ನು ಸೇರಲು ಸಮರ್ಥರಾಗಿದ್ದೀರಿ. ಅಂತಹ ನೀವು ಎಲ್ಲ ಕಡೆಯೂ ಮುಳ್ಳು ಕಲ್ಲು ಮುಂತಾದವುಗಳಿಂದ ನನ್ನನ್ನು ರಕ್ಷಿಸಿ ಎಂದು ಹೇಳುತ್ತಾ ಮೊದಲು ಬಲಗಾಲಿಗೂ ಆಮೇಲೆ ಎಡಗಾಲಿಗೂ ಪಾದರಕ್ಷೆಗಳನ್ನು ಹಾಕಿಕೊಳ್ಳಬೇಕು.

"ದಿವಶ್ಛದಿರ್ಸಿ" ಇತಿ ಛತ್ರಮಾದತ್ತೇ

ಎಲೈ ಛತ್ರಿಯೇ ಆಕಾಶದಿಂದುಂಟಾಗುವ ಬಿಸಿಲು ಮಳೆಗಳಿಗೆ ತಡೆಯಾಗಿರುವೆ ಎಂದು ಛತ್ರಿಯನ್ನು ತೆಗೆದುಕೊಳ್ಳಬೇಕು.

"ವೇಣುರಸಿ ವಾನಸ್ಪತ್ಯೋಽಸಿ ಸರ್ವತೋಮಾಪಾಹಿ"

ಇತಿ ವೈಣವಂ ದಂಡಂ ಗೃಹೀತ್ವಾ

ಎಲೈ ದಂಡವೇ! ನೀನು ಬಿದುರಿನಿಂದ ವಿಕಾರವಾಗಿರುವೆ. ವನಸ್ಪತಿಗಳ

ಸಂಬಂಧವೂ ಆಗಿರುವೆ. ನನ್ನನ್ನು ರೋಗಸರ್ಪಾದಿಗಳ ಭಯದಿಂದ ಕಾಪಾಡು ಎಂದು ದಂಡವನ್ನು ತೆಗೆದುಕೊಳ್ಳಬೇಕು.

"ಆಯುಷ್ಯ ಮಿತಿ ಸೂಕ್ತೇನ ಸುವರ್ಣಮಣಿಂ ಕಂಠೇಬಧ್ನೀಯಾತ್

ಆಯುಷ್ಯಂ ವರ್ಚಸ್ಯಂ ರಾಯಸ್ಪೋಷಮೌದ್ಭಿದಂ ।

ಇದಂ ಹಿರಣ್ಯಂ ವರ್ಚಸ್ವಜ್ಜೈತ್ರಾಯಾವಿಶತಾದಿಮಾಂ ॥

ಆಯುಸ್ಸು, ವರ್ಚಸ್ಸು, ಧನ ಸಂರಕ್ಷಣೆ ಇವುಗಳ ಅಭಿವೃದ್ಧಿಗೋಸ್ಕರ ಈ ಸುವರ್ಣವು ನನ್ನ ಶರೀರವನ್ನಲಂಕರಿಸಲಿ.

ಉಚ್ಚೈರ್ವಾಜಿಪೃತನಾಷಾಟ್ ಸಭಾಸಾಹಂ ಧನಂಜಯಂ ।

ಸರ್ವಾಸ್ಸಮಗ್ರಾ ಋದ್ಧಯೋ ಹಿರಣ್ಯೇಽಸ್ಮಿಂತ್ಸಮಾಹಿತಾಃ ॥

ಬಲಿಷ್ಠವಾದ ಕುದುರೆಗಳನ್ನು ಹೊಂದಿರುವ ಶತ್ರುಸೈನ್ಯವನ್ನು ತಿರಸ್ಕರಿಸುವ ಧನವನ್ನು ಜಯಿಸುವ ಈ ಹಿರಣ್ಯವು ಅನ್ನ ವಸ್ತ್ರಾದಿಗಳಿಂದ ಸಮೃದ್ಧಿಯಾಗಿ ಕೂಡಿದ್ದಾಗಿದೆ.

ಶುನಮಹಂ ಹಿರಣ್ಯಸ್ಯ ಪಿತುರ್ನಾಮೇವ ಜಗ್ರಭ ।

ತೇನ ಮಾಂ ಸೂರ್ಯತ್ವಚಸಮಕರಂ ಪುರುಷಪ್ರಿಯಂ ॥

ನಾನು ಸುಖವನ್ನುಂಟು ಮಾಡುವ ಬಂಗಾರದ ಈ ಸರವನ್ನು ತೆಗೆದು ಕೊಂಡೆನು. ಪ್ರೀತಿಯಿಂದ ಹೇಗೆ ಮಗನು ತಂದೆಯ ಹೆಸರನ್ನೇ ಪುನಃಪುನಃ ಹೇಳುತ್ತಿರುತ್ತಾನೋ ಹಾಗೆ ಈ ಕಾಂತಿರೂಪವಾದ ಸುವರ್ಣ ಹಾರದಿಂದ ನನ್ನ ಶರೀರವು ಸೂರ್ಯನಂತೆ ಪ್ರಕಾಶಮಾನವಾಯಿತೋ ಹಾಗೆ ಮನುಷ್ಯರಲ್ಲಿ ನಾನು ಶ್ರೇಷ್ಠನೂ ಪ್ರೀತಿಪಾತ್ರನೂ ಆಗುವೆನು.

ಸಂರಾಜಂ ಚ ವಿರಾಜಂ ಚಾಽಭಿಷ್ಟಿರ್ಯಾಚಮೇಧ್ರುವಾ

ಲಕ್ಷ್ಮೀ ರಾಷ್ಟ್ರಸ್ಯ ಯಾ ಮುಖೇ ತಯಾ ಮಾಮಿಂದ್ರ ಸಂಸೃಜ ॥

ಎಲೈ ಇಂದ್ರನೇ, ಯಾವ ಸ್ಥಿರವಾದ ಅಪಾಯವಿಲ್ಲದಿರುವ ಪುತ್ರಪಶ್ವಾದಿಗಳ ಪ್ರಾರ್ಥನೆ ಮತ್ತು ಯಾವ ರಾಷ್ಟ್ರ ಲಕ್ಷ್ಮಿಯು ಏಳಿಗೆ ಇವುಗಳಿಂದ ನನ್ನನ್ನು ಕಾಂತಿಯುಕ್ತನನ್ನಾಗಿ ಸೇರಿಸು.

ಅಗ್ನೇಃ ಪ್ರಜಾತಂ ಪರಿಯದ್ಧಿರಣ್ಯಮಮೃತಂ ಯಜ್ಞೇ ಅಧಿ ಮರ್ತ್ಯೇಷು ।

ಯ ಏನದ್ವೇದ ಸ ಇದೇನ ಮರ್ಹತಿ ಜರಾಮೃತ್ಯುರ್ಭವತಿ ಯೋ ಬಿಭರ್ತಿ ॥

ಅಗ್ನಿಯಿಂದ ಉತ್ಪತ್ತಿಯಾದ ಯಾವ ಸುವರ್ಣವು ಮನುಷ್ಯರಲ್ಲಿ ಅಮೃತರೂಪವಾಗಿ ಉಂಟಾಯಿತು. ಇಂತಹ ಮಹಿಮೆಯುಳ್ಳ ಈ ಸುವರ್ಣವನ್ನು ಯಾವನು ತಿಳಿಯುತ್ತಾನೋ ಅಂತಹ ಮನುಷ್ಯನು ವೃದ್ಧಾಪ್ಯಾದಿಗಳಿಲ್ಲದೆ ಯುವಕನಾಗಿಯೇ ಸಾವಾಗಲೂ ಸುವರ್ಣದ ಅಲಂಕಾರವುಳ್ಳವನಾಗಿ ಇರುತ್ತಾನೆ.

ಯದ್ವೇದ ರಾಜಾ ವರುಣೋ ಯದು ದೇವೀ ಸರಸ್ವತೀ ॥

ಇಂದ್ರೋ ಯದ್ವೃತ್ರಹಾ ವೇದ ತನ್ಮೇ ವರ್ಚಸ ಆಯುಷಾ

ರಾಜನಾದ ವರುಣನೂ ಸರಸ್ವತೀದೇವಿಯೂ ಯಾವ ಹಿರಣ್ಯವನ್ನು ತಿಳಿದರೋ ಯಾವ ಇಂದ್ರನೂ ತಿಳಿದನೋ ಅಂತಹ ಸುವರ್ಣವು ನನ್ನ ವರ್ಚಸ್ಸಿಗೂ ಆಯುಸ್ಸಿಗೂ ಕಾರಣವಾಗಿರಲಿ.

ನ ತದ್ರಕ್ಷಾಂಸಿ ನ ಪಿಶಾಚಾಸ್ತರಂತಿ ದೇವಾನಾಮೋಜಃ ಪ್ರಥಮಜಂ ಹ್ಯೇತತ್ ।

ಯೋ ಬಿಭರ್ತಿ ದಾಕ್ಷಾಯಣಾ ಹಿರಣ್ಯಂ ಸ ದೇವೇಷು ಕೃಣುತೇ

ದೀರ್ಘಮಾಯುಃ ॥

ರಾಕ್ಷಸರು ಆ ಹಿರಣ್ಯವನ್ನು ಕುರಿತು ಚಲಿಸುವುದಿಲ್ಲ. ಪಿಶಾಚಿಗಳು ಚಲಿಸುವುದಿಲ್ಲ. ಯಾವ ಈ ಹಿರಣ್ಯವು ದೇವತೆಗಳಿಗೆ ಮೊದಲನೆಯ ಶಕ್ತಿ ರೂಪವಾಗಿದೆ. ಗೌರೀ ರೂಪಳಾದ ದಾಕ್ಷಾಯಣೀ ದೇವಿಯಿಂದ ಮೊದಲು ಧರಿಸಲ್ಪಟ್ಟಿದ್ದಿತು. ಅಂತಹ ಬಂಗಾರವನ್ನು ಯಾವನು ಧರಿಸುತ್ತಾನೆಯೋ ಅವನು ದೇವತೆಗಳ ಮಧ್ಯದಲ್ಲಿ ತನಗೆ ದೀರ್ಘಾಯುಸ್ಸನ್ನು ಉಂಟುಮಾಡಿಕೊಳ್ಳುತ್ತಾನೆ. ಮನುಷ್ಯರ ಮಧ್ಯದಲ್ಲಿ ಯಾವನು ಧರಿಸುತ್ತಾನೆಯೋ ಅವನೇ ತನ್ನ ಆಯುಸ್ಸನ್ನು ವೃದ್ಧಿಪಡಿಸಿಕೊಳ್ಳುತ್ತಾನೆ.

| || || ||

ಯದಾ ಬಧ್ನನ್ ದಾಕ್ಷಾಯಣಾ ಹಿರಣ್ಯಂ ಶತಾನೀಕಾಯ ಸುಮನಸ್ಯಮಾನಾ ।

| || | | |

ತನ್ಮ ಆ ಬಧ್ನಾಮಿ ಶತ ಶಾರದಾಯಾಯುಷ್ಮಾನ್ ಜರದಷ್ಟಿರ್ಯಥಾಽಸತ್ ॥

ದಾಕ್ಷಾಯಣ ಗೋತ್ರೋತ್ಪನ್ನರಾದ, ಒಳ್ಳೆಯ ಮನಸ್ಸುಳ್ಳವನಾದ, ಸ್ವಂಶೋತ್ಪನ್ನರಾದ ಜನರಲ್ಲಿ ಸತ್ರಾಜಿತನ ಮಗನಾದ ಶತಾನೀಕನೆಂಬವನಿಗೆ ಆತನ ರಕ್ಷಣೆಗಾಗಿ ಬಂಗಾರವನ್ನು ಧರಿಸಿದ್ದರೋ ಅಂತಹ ಮನುಷ್ಯನಿಗೆ ನೂರು ವರ್ಷಗಳ ಆಯುಷ್ಯಕ್ಕೆ ಮುಪ್ಪಿನ ಪರ್ಯಂತ ನನ್ನ ಶರೀರದಲ್ಲಿ ಆ ಬಂಗಾರವನ್ನು ಧರಿಸುತ್ತೇನೆ.

| || ||

ಘೃತಾದುಲ್ಲುಪ್ತಂ ಮಧುಮತ್ಸುವರ್ಣಂ ಧನಂಜಯಂ ಧರುಣಂ ಧಾರಯಿಷ್ಣು।

| || | |

ಋಣಕ್ಸಪತ್ನಾದಥರಾಂಶ್ಚ ಕೃಣ್ವದಾರೋಹ ಮಾಂ ಮಹತೇ ಸೌಭಗಾಯ ॥

ತುಪ್ಪಕ್ಕಿಂತಲೂ ಹೆಚ್ಚಿನದಾದ ಅಥವಾ ತುಪ್ಪಕ್ಕಿಂತಲೂ ಹೆಚ್ಚಿನ ಕಾಂತಿಯುಳ್ಳ ಜೇನು ತುಪ್ಪವೇಮುಂತಾದವುಗಳನ್ನು ಸಂಪಾದಿಸುವ ಸಾಮರ್ಥ್ಯವುಳ್ಳ ಶತ್ರುಗಳ ಧನವನ್ನು ಜಯಿಸುವ, ಧಾರಣಾ ಸಾಮರ್ಥ್ಯವುಳ್ಳ ಬಂಗಾರವನ್ನು ಕುರಿತು "ಎಲೈ ಸುವರ್ಣವೇ ಶತ್ರುಗಳನ್ನು ತಿರಸ್ಕರಿಸಿ ಅವರನ್ನು ಕೊಲ್ಲುವ ಸಾಮರ್ಥ್ಯವುಳ್ಳ ನೀನು ನನ್ನ ಹೆಚ್ಚಿನ ಸೌಭಾಗ್ಯಕ್ಕಾಗಿ ನನ್ನ ಕತ್ತನ್ನು ಏರು" ಎಂದು ಪ್ರಾರ್ಥಿಸುವುದು.

ಪ್ರಿಯಂ ಮಾ ಕುರು ದೇವೇಷು ಪ್ರಿಯಂ ರಾಜಸು ಮಾ ಕುರು ।

ಪ್ರಿಯಂ ವಿಶ್ವೇಷು ಗೋಪ್ತ್ರೇಷು ಮಯಿ ಧೇಹಿ ರುಚಾರುಚಾ ॥

ಎಲೈ ಸುವರ್ಣವೇ, ನಿನ್ನನ್ನು ಧರಿಸಿರುವಿಕೆಯಿಂದ ದೇವತೆಗಳ ಮಧ್ಯದಲ್ಲಿ ಪ್ರಕಾಶಿಸುತ್ತಿರಲಾಗಿ ನಿನ್ನನ್ನು ದಾನ ಮಾಡುವಿಕೆಯಿಂದ ನನ್ನನ್ನು ಪ್ರೀತಿಪಾತ್ರನನ್ನಾಗಿ ಮಾಡು, ಹಾಗೆಯೇ ರಾಜರ ಮಧ್ಯದಲ್ಲಿ ಹಿತಕರನನ್ನಾಗಿ ಮಾಡು. ಸಮಸ್ತ ಭೂತಗಳಲ್ಲಿಯೂ ನನ್ನನ್ನು ಪ್ರೀತಿಪಾತ್ರನನ್ನಾಗಿ ಮಾಡು. ನನ್ನ ವಂಶದಲ್ಲಿಯೂ ನನ್ನನ್ನು ಹಿತಕರನನ್ನಾಗಿ ಮಾಡು. ನಿನ್ನ ಸಂಬಂಧವಾದ ಕಾಂತಿಯಿಂದ ನನ್ನಲ್ಲಿಯೂ ಕಾಂತಿಯನ್ನು ಧರಿಸು.

ಅರ್ವಾಂಚ ಮಿಂದ್ರಮಮುತೋ ಹವಾಮಹೇಯೋ ಗೋಜಿದ್ಧನಜಿದಶ್ವಜಿದ್ಯಃ।

ಇಮಂ ನೋ ಯಜ್ಞಂ ವಿಹವೇ ಜುಷಸ್ವಾಸ್ಯ ಕುರ್ಮೋಹರಿವೋ

ಮೇದಿನಂ ತ್ವಾ ॥

ಈ ಸ್ವರ್ಗ ಲೋಕದ ಎದುರಿಗಿರುವ ಇಂದ್ರನನ್ನು ಕರೆಯುತ್ತೇವೆ. ಪಣಿಗಳಿಂದ ಅಪಹರಿಸಲ್ಪಟ್ಟ ಗೋವುಗಳನ್ನು ಜಯಿಸಿದ, ಶತ್ರು ಧನಗಳನ್ನು ಜಯಿಸಿದ, ಕುದುರೆಗಳನ್ನು ಜಯಿಸಿದ, ಎಲೈ ಹರಿದ್ವರ್ಣ ಹಳದಿ ಬಣ್ಣವುಳ್ಳ ಕುದುರೆಗಳುಳ್ಳ ಎಲೈ ಇಂದ್ರನೇ, ನಮ್ಮ ಈ ಯಜ್ಞವನ್ನು ನಿನಗೆ ಬೇರೆ ಬೇರೆ ಕರೆಯಿದ್ದರೂ ಕೂಡ ಇಲ್ಲಿ ಬಂದು ಅಲಂಕರಿಸು. ನಿನ್ನನ್ನು ಈ ಯಜ್ಞದಲ್ಲಿ (ವಿವಾಹದಲ್ಲಿ) ನಾವು ಹೋಮಮಾಡುವ ಸಮಿತ್ತೇ ಮೊದಲಾದ ಹೋಮ ದ್ರವ್ಯಗಳ ಸಾರವುಳ್ಳವನನ್ನಾಗಿ ಮಾಡುತ್ತೇವೆ.

ಈ ರೀತಿಯಾಗಿ ಹೂಡನಿಂದ ಕೊಡಲ್ಪಟ್ಟ, ಅಲಂಕಾರ ಪದಾರ್ಥಗಳನ್ನು ಅಲಂಕರಿಸಿದ ಮೇಲೆ.

'ಅಥಾಚಾರಾದ್ಯಾತ್ರಾಂ ಕಾನಿಚಿತ್ಪದಾನಿ ಗತ್ವಾ",

ಪೂರ್ವ ಸಂಪ್ರದಾಯದಂತೆ ಕಾಶೀಯಾತ್ರೆಗೆಂದು ಹೊರಟು ಸ್ವಲ್ಪದೂರ ಹೋಗಿ, ಅಲ್ಲಿ ಮಾವನ ಮುಂದೆ,

"ಚರಿತಬ್ರಹ್ಮಚರ್ಯೋಽಹಂ ಕೃತವ್ರತ ಚತುಷ್ಟಯಃ |"
ಸ್ನಾತಕೋಽಹಂ ಗಮಿಷ್ಯಾಮಿ ಕಾಶೀ ಭವದನುಜ್ಞಯಾ ||

ಬ್ರಹ್ಮಚರ್ಯವ್ರತವನ್ನು ನಿಷ್ಠೆಯಿಂದ ಆಚರಿಸಿ, ವ್ರತ ಚತುಷ್ಟಯವನ್ನು ಮಾಡಿಕೊಂಡು ಸ್ನಾತಕನಾದ (ವಿದ್ಯೆಯನ್ನು ಚನ್ನಾಗಿ ಅಧ್ಯಯನ ಮಾಡಿದವನು ಸ್ನಾತಕ) ನಾನು ನಿನ್ನ ಅಪ್ಪಣೆಯಿಂದ ಕಾಶೀಯಾತ್ರೆಯನ್ನು ಮಾಡಲು ಹೊರಡುತ್ತೇನೆಂದು ಹೇಳುತ್ತಾನೆ.

ಆಗ ಕನ್ಯಾದಾತನು,

"ಸಾಲಂಕೃತಾಂ ಮಮ ಸುತಾಂ ಕನ್ಯಾಂ ದಾಸ್ಯಾಮಿ ತೇ ದ್ವಿಜ |
ಪಾಣಿಂ ಗೃಹೀತ್ವಾ ಸಾಽಗ್ನಿಸ್ತ್ವ ಗಚ್ಛತ್ವಂ ಗಚ್ಛಮದ್ಗೃಹಂ ||"

ಅಲಂಕೃತಳಾದ ನನ್ನ ಮಗಳನ್ನು ನಿನಗೆ ಕೊಟ್ಟು ಲಗ್ನ ಮಾಡಿಕೊಡುತ್ತೇನೆ. ಅಗ್ನಿ ಸಮೇತನಾಗಿ ನಿನ್ನ ಹೆಂಡತಿಯೊಡನೆ ಕಾಶೀಯಾತ್ರೆಗೆ ಹೊರಡು. ಈಗ ನನ್ನ ಮನೆಗೆ ವಿವಾಹ ಮಾಡಿಕೊಳ್ಳುವುದಕ್ಕಾಗಿ ಬಾ ಎಂದು ಪ್ರಾರ್ಥಿಸುತ್ತಾನೆ.

ವರನು ತಾನು ಸಮಾವರ್ತನ ಹೋಮವನ್ನು ಮಾಡಿದ ಅಗ್ನಿಯ ಸಮೀಪಕ್ಕೆ ಬಂದು ಉಪರಿ ನಿಹಿತಾಂ ಸಮಿಧಂ ಗೃಹೀತ್ವಾ, ತಿಷ್ಠನ್ನೇವ ಸ್ಮೃತಂಚಮ ಇತ್ಯಾದಿರ್ಭಿ ಸ್ವಾಹಾಂತಾಃ ಆಧ್ಯಾವಾ ದದ್ಯಾತ್ || ಎಂದು ಹೇಳಿರುವುದರಿಂದ ತಾನು ಸಮಾವರ್ತನ ಹೋಮವನ್ನು ಮಾಡುವುದಕ್ಕೆ ಮುಂಚೆ ತಾನು ಕುಳಿತಿರುವ ಜಾಗದಿಂದ ಸ್ವಲ್ಪ ಮೇಲ್ಭಾಗದಲ್ಲಿ ಇಟ್ಟಿದ್ದ ಒಂದು ಸಮಿತ್ತನ್ನು ತಾನು ನಿಂತು ಕೈಯಲ್ಲಿ ತೆಗೆದುಕೊಂಡು, ಈ ಮುಂದೆ ಹೇಳುವ ಮಂತ್ರಗಳನ್ನೆಲ್ಲಾ ಹೇಳಿ ಕೊನೆಗೆ ಹೋಮ ಮಾಡಬೇಕು.

"ಸ್ಮೃತಂ ಚ ಮೇಽಸ್ಮೃತಂ ಚಮೇ ತನ್ಮ ಉಭಯ ವ್ರತಂ ।

ಒಳ್ಳೆಯ ಪದಾರ್ಥಗಳನ್ನು ಸ್ಮರಿಸುವುದು ಮತ್ತು ಕೆಟ್ಟ ಪದಾರ್ಥ ಗಳನ್ನು ಸ್ಮರಿಸದಿರುವುದು. ಇವೆರಡೂ ನನ್ನ ಎರಡು ವ್ರತಗಳಾಗಿರಲಿ. (ನಿಯಮ).

ನಿಂದಾ ಚ ಮೇಽನಿಂದಾಚಮೇಽ....ವ್ರತಂ ॥

ಒಳ್ಳೆಯ ಶಾಸ್ತ್ರಾದಿಗಳನ್ನು ಸ್ಮರಿಸುವುದು. ದುಷ್ಟವಾದ ಶಾಸ್ತ್ರಾದಿ ಗಳನ್ನು ಸ್ಮರಿಸದಿರುವುದು ಇವೆರಡೂ ನನ್ನ ವ್ರತಗಳಾಗಿರಲಿ.

ವಿದ್ಯಾ ಚಮೇಽವಿದ್ಯಾಽ...ವ್ರತಂ ॥

ಸದ್ವಿದ್ಯೆಯನ್ನು ಸ್ಮರಿಸುವುದು. ಅಸದ್ವಿದ್ಯೆಯೆಂದರೆ ದುಷ್ಟವಾದ ವಿದ್ಯೆ ಯನ್ನು ಸ್ಮರಿಸದಿರುವುದು. ಇವೆರಡೂ ನನ್ನ ವ್ರತಗಳಾತರಲಿ.

ಶ್ರದ್ಧಾ ಚಮೇಽಶ್ರದ್ಧಾ ಚಮೇಽ....ವ್ರತಂ ॥

ಮಾಡಬೇಕಾದ ಕೆಲಸ ಕಾರ್ಯಗಳಲ್ಲಿ ಉತ್ಸಾಹವನ್ನು ತೋರಿಸುವುದು ಮಾಡಬಾರದ ಕೆಲಸ ಕಾರ್ಯಾದಿಗಳಲ್ಲಿ ಉತ್ಸಾಹವನ್ನು ತೋರಿಸದಿರುವುದು. ಇವೆರಡೂ ನನ್ನ ವ್ರತಗಳಾಗಿರಲಿ.

ಪ್ರಜ್ಞಾ ಚಮೇಽಪ್ರಜ್ಞಾ ಚಮೇಽ....ವ್ರತಂ ॥

ಆತ್ಮಜ್ಞಾನದ ವಿಷಯದಲ್ಲಿ ಹೆಚ್ಚಾದ ತಿಳುವಳಿಕೆಯನ್ನು ತೋರಿಸುವುದು ಆತ್ಮಜ್ಞಾನವಲ್ಲದುದರಲ್ಲಿ ಅನಾದರವನ್ನು ತೋರಿಸುವುದು. ಇವೆರಡೂ ನನ್ನ ವ್ರತಗಳಾಗಿರಲಿ.

ಇಷ್ಟಂ ಚ ಮೇಽನಿಷ್ಟಂ ಚಮೇಽ...ವ್ರತಂ ॥

ಇಷ್ಟಪಾದ ಯಜ್ಞಯಾಗಾದಿಗಳು ದೇವತಾರ್ಚನೆಗಳಲ್ಲಿ ವಿಶ್ವಾಸವನ್ನು ತೋರಿಸುವುದು. ತದ್ವಿರುದ್ಧವಾದ ಕರ್ಮಗಳಲ್ಲಿ ಅನಾದರಣೆಯನು. ತೋರಿಸುವುದು. ಈ ಎರಡೂ ನನ್ನ ವ್ರತಗಳಾಗಿರಲಿ.

ದತ್ತಂ ಚಮೇಽದತ್ತಂ ಚಮೇಽ....ವ್ರತಂ ||

ಸತ್ಪಾತ್ರರಲ್ಲಿ ದಾನಮಾಡುವುದು, ಕರ್ಮಭ್ರಷ್ಟನಿಗೆ ದಾನ ಮಾಡದಿರುವುದು ಈ ಎರಡೂ ನನ್ನ ವ್ರತಗಳಾಗಿರಲಿ.

ಅಧೀತಂ ಚ ಮೇಽನಧೀತಂ ಚ ಮೇಽವ್ರತಂ ||

ಗುರುವಿನಿಂದ ಅಧ್ಯಯನವನ್ನು ಮಾಡುವುದು. ಗುರುವಿಲ್ಲದೇ ಪುಸ್ತಕಾದಿಗಳಿಂದ ಓದಿರುವುದು. ಈ ಎರಡೂ ನನ್ನ ವ್ರತಗಳಾಗಿರಲಿ.

ಕೃತಂ ಚ ಮೇಽಕೃತಂ ಚ ಮೇಽವ್ರತಂ ||

ಶಾಸ್ತ್ರೋಕ್ತವಾದ ಯೋಗ್ಯವಾದ ಅನುಷ್ಠಾನವನ್ನು ಮಾಡುವುದು. ವಿಹಿತವಲ್ಲದ ಅನುಷ್ಠಾನವನ್ನು ಮಾಡದಿರುವುದು. ಈ ಎರಡೂ ನನ್ನ ವ್ರತಗಳಾಗಿರಲಿ.

ಸತ್ಯಂ ಚ ಮೇಽಸತ್ಯಂ ಚ ಮೇಽವ್ರತಂ ||

ಯಥಾರ್ಥವಾದದ್ದನ್ನು ಹೇಳುವುದು. ನಿಜವಾಗದಿರುವುದನ್ನು ಹೇಳದಿರುವುದು. ಈ ಎರಡೂ ನನ್ನ ವ್ರತಗಳಾಗಿರಲಿ

ಶ್ರುತಂ ಚ ಮೇಽಶ್ರುತಂ ಚ ಮೇಽವ್ರತಂ ||

ಸರಿಯಾದ ಶಾಸ್ತ್ರವನ್ನು ಕೇಳುವುದು. ಶಾಸ್ತ್ರೋಕ್ತವಲ್ಲದ್ದನ್ನು ಕೇಳದಿರುವುದು. ಈ ಎರಡೂ ನನ್ನ ವ್ರತಗಳಾಗಿರಲಿ.

ವ್ರತಂ ಚ ಮೇsವ್ರತಂ ಚರ್ನೋsವ್ರತಂ ॥

ವೇದೋಕ್ತನಾದ ಅನುಷ್ಠಾನಗಳಲ್ಲಿ ನಿಯಮದಿಂದಿರುವುದು. ವೇದೋಕ್ತ ವಲ್ಲದ ಅನುಷ್ಠಾನಗಳಲ್ಲಿ ನಿಯಮವಿಲ್ಲದಿರುವಿಕೆಯು. ಈ ಎರಡೂ ನನ್ನ ವ್ರತಗಳಾಗಿರಲಿ.

"ಯದಗ್ನೇ ಸೇಂದ್ರಸ್ಯ ಸಪ್ರಜಾಪತಿಕಸ್ಯ ಸರ್ಷಿಕಸ್ಯ ಸರ್ಷಿರಾಜನ್ಯಸ್ಯ ಸ ಪಿತೃಕಸ್ಯ ಸ ಪಿತೃರಾಜನ್ಯಸ್ಯ, ಸ ಮನುಷ್ಯಸ್ಯ ಸ ಮನುಷ್ಯರಾಜನ್ಯಸ್ಯ ಸಾಕಾಶಸ್ಯ ನಾತೀಕಾಶಸ್ಯ ಸಾನೂಕಾಶಸ್ಯ ಸಪ್ರತೀಕಾಶಸ್ಯ ಸದೇವಮನುಷ್ಯಸ್ಯ ಸಗಂಧರ್ವಾಪ್ಸರಸ್ಕಸ್ಯ ಸಹಾರಣ್ಯೈಶ್ಚ ಪಶುಭಿರ್ಗ್ರಾಮ್ಯೈಶ್ಚ ಯನ್ಮ ಆತ್ಮನ ಆತ್ಮನಿವ್ರತಂ ತನ್ಮೇ ಸರ್ವವ್ರತಮಿದಮಹಾಮಗ್ನೇ ಸರ್ವತೋಭವಾಮಿ ಸ್ವಾಹಾ ॥" ಅಗ್ನಯ ಇದಂ ನಮಮ ॥

ಅಗ್ನಿಸಮೇತನಾದ ಇಂದ್ರ, ಪ್ರಜಾಪತಿ, ವಸಿಷ್ಠಾದಿ ಋಷಿಗಳು, ಪಿತೃ ದೇವತೆಗಳು, ಋಮ, ಮನುಷ್ಯರು, ರಾಜ, ತನಗೆ ಅವಕಾಶ ಸಿಕ್ಕಿದಾಗ ದಾನ ಮಾಡುವುದು, ಅವಕಾಶವನ್ನು ಮಾಡಿಕೊಡುವುದು, ಕಿಟಿಕಿಗಳಿಂದ ಕೂಡಿರುವ ಮನೆ, ಕಿಟಕಿಯೊಳಗಿರುವುದು, ಪ್ರಕಾಶಮಾನವಾಗಿರುವಿಕೆ, ಅಗ್ನಿಯ ಮಧ್ಯ ದಲ್ಲಿರುವಿಕೆ, ದೇವತೆಗಳಿಂದ ಕೂಡಿದ ಮನುಷ್ಯ, ಗಂಧರ್ವರಿಂದ ಕೂಡಿದ ಅಪ್ಸರೆಯರು, ಪಶ್ವಾದಿಗಳು, ಈ ರೀತಿಯಾಗಿ ಇಂದ್ರಾದಿಗಳಿಂದ ಕೂಡಿದ ಅಗ್ನಿಯ ಯಾವ ವ್ರತವಿರುವುದೋ, ತನಗೆ ತನ್ನಲ್ಲಿ ಯಾವ ಯಾಚನೆಯಿಲ್ಲದಿ ರುವ ವ್ರತವಿರುವುದೋ, ಇಂತಹ ಎಲ್ಲಾ ವ್ರತಗಳುಳ್ಳವನಾಗಿ ಆಗುತ್ತೇನೆ, ಎಲೈ ಅಗ್ನಿಯೇ ನಿನಗೆ ಈ ಸಮಿತ್ತನ್ನು ಅರ್ಪಿಸುತ್ತೇನೆ.

॥ ॥ । ॥ ॥
ಮಮಾಗ್ನೇ ವರ್ಚೋ ವಿಹವೇಷ್ವಸ್ತು ವಯಂ ತ್ವೇಂಧಾನಾಸ್ತನ್ವಂ ಪುಷೇಮ।

॥ । । ।
ಮಹ್ಯಂ ನಮಂತಾಂಪ್ರದಿಶಶ್ಚತಸ್ರ ಸ್ತ್ವಯಾಧ್ಯಕ್ಷೇಣಪೃತನಾ ಜಯೇಮ॥1॥

ಎಲೈ ಅಗ್ನಿಯೇ, ನಿನ್ನ ಅನುಗ್ರಹದಿಂದ ಯುದ್ಧಗಳಲ್ಲಿ ಅಥವಾ ಯಜ್ಞಗಳಲ್ಲಿ ನನಗೆ ಶಕ್ತಿಸಾಮರ್ಥ್ಯಗಳುಂಟಾಗಲಿ. ನಿನ್ನನ್ನು ಸಮಿತ್ತೇ ಮೊದಲಾದುವುಗಳಿಂದ ಪ್ರಕಾಶಗೊಳಿಸಿ ಹವಿಸ್ಸೇ ಮೊದಲಾದುವುಗಳಿಂದ ನಿನ್ನ ಶರೀರವನ್ನು ಪೋಷಿಸಿ ಬೆಳೆಸುತ್ತೇವೆ. ನಾಲ್ಕು ದಿಕ್ಕುಗಳಲ್ಲಿರುವ ಜನರು ನನಗೆ ನಮಸ್ಕರಿಸಲಿ ಎಂದರೆ ನನ್ನ ಆಜ್ಞೆಗೆ ಒಳಪಟ್ಟಿರಲಿ. ಸರ್ವರಿಗೂ ಒಡೆಯನಾದ ನಿನ್ನ ಸಹಾಯದಿಂದ ನಾವು ನಿನ್ನ ಶತ್ರುಗಳನ್ನು ಜಯಿಸುವಂತಾಗಲಿ.

ಮಮದೇವಾ ವಿಹವೇ ಸಂತು ಸರ್ವ ಇಂದ್ರವಂತೋ ಮರುತೋ ವಿಷ್ಣುರಗ್ನಿಃ |

ಮಮಾಂತ ರಿಕ್ಷಮುರುಲೋಕಮಸ್ತು ಮಹ್ಯಂ ವಾತಃ

ಪವತಾಂ ಕಾಮೇ ಅಸ್ಮಿನ್ || ೨ ||

ಇಂದ್ರ, ಮರುತ್ತುಗಳು, ವಿಷ್ಣು, ಅಗ್ನಿ, ಮೊದಲಾದ ಎಲ್ಲಾ ದೇವತೆಗಳೂ ಯದ್ಧದಲ್ಲಿ ಅಥವಾ ಯಜ್ಞದಲ್ಲಿ ನನಗೆ ಸಹಾಯಕರಾಗಿರಲಿ. ನನ್ನ ವಿಷಯದಲ್ಲಿ ಅಂತರಿಕ್ಷವೂ ಚನ್ನಾಗಿ ಪ್ರಕಾಶಿಸಲಿ. ಫಲಾಪೇಕ್ಷೆಯುಳ್ಳ ನನಗೋಸ್ಕರ ವಾಯುವು ಸುಖಕರವಾಗಿ ಬೀಸಲಿ.

ಮಯಿ ದೇವಾದ್ರವಿಣ ಮಾಯಜಂತಾಂ ಮಯ್ಯಾ

ಶೀರಸ್ತು ಮಯಿ ದೇವಹೂತಿಃ |

ದೈವ್ಯಾಹೋತಾರೋ ವನುಷಂತ ಪೂರ್ವೇಽರಿಷ್ಟಾಸ್ಸ್ಯಾಮ

ತನ್ವಾಸುಽವೀರಾಃ || ೩ ||

ಸ್ತೋತ್ರ ಮಾಡುವ ನನಗೆ ಸಮಸ್ತ ದೇವತೆಗಳೂ ಧನವನ್ನು ಒದಗಿಸಿಕೊಡಲಿ. ಅವರ ಅನುಗ್ರಹದಿಂದ ಆಶೀರ್ವಾದ ರೂಪವಾದ ಯಜ್ಞವೂ ಅದರ ಫಲವೂ ನನಗೆ ಲಭಿಸಲಿ. ದೇವತೆಗಳನ್ನಾಹ್ವಾನ ಮಾಡುವ ನಮ್ಮ ಋತ್ವಿಜರುಗಳು ಎಲ್ಲರಿಗಿಂತಲೂ ಮೊದಲೇ ದೇವತೆಗಳನ್ನು ಪ್ರಾರ್ಥಿಸಿ ಯಾಗ ಮಾಡಲಿ. ನಾವು ನಮ್ಮ ಶರೀರಗಳಲ್ಲಿ ರೋಗಾದ್ಯುಪದ್ರವಗಳಿಲ್ಲದೇ ಸುಖವಾಗಿರೋಣ ಮತ್ತು ನಾವು ವೀರ್ಯವಂತರಾದ ಪುತ್ರರನ್ನು ಪಡೆಯುವಂತಾಗಲಿ.

ಮಹ್ಯಂ ಯಜಂತು ಮಮಯಾನಿ ಹವ್ಯಾ ಕೂತಿಸ್ಸತ್ಯಾ ಮನಸೋಮೇಅಸ್ತು

ಏನೋ ಮಾನಿಗಾಂ ಕತಮಚ್ಚನಾಽಹಂ ವಿಶ್ವೇ ದೇವಾಸೋ

ಅಧಿವೋಚತಾನಃ ॥ ೪ ॥

ನಾನು ಸಿದ್ಧಪಡಿಸಿರುವ ಈ ಹವಿಸ್ಸನ್ನು ನಮ್ಮ ಋತ್ವಿಜರು ನನಗಾಗಿ ದೇವತೆಗಳಿಗೆ ಅರ್ಪಿಸಲಿ. ನನ್ನ ಮನೋಭಿಷ್ಟವು ಫಲಿಸಲಿ. ನನ್ನ ಯಾವ ವಿಧವಾದ ಪಾಪವೂ ಉಂಟಾಗದಿರಲಿ. ಎಲ್ಲಾ ಸಮಸ್ತ ದೇವತೆಗಳಿರಾ, ನೀವು ನಮಗೆ ಒಳ್ಳೆಯದಾಗಲೆಂದು ಆಶೀರ್ವದಿಸಿರಿ.

ದೇವಿಷ್ಣಳು ವಿರ್ರುರುನಃಕೃಣೋತ ವಿಶ್ವೇ ದೇವಾಸ ಇಹ ವೀರಯಧ್ವಂ ।

ಮಾಹಾಸ್ಮಹಿ ಪ್ರಜಯಾ ಮಾತನೂಭಿರ್ಮಾರಧಾಮ

ದ್ವಿಷತೇ ಸೋಮರಾಜ ॥ 5 ॥

ಮಹಾ ಮಹಿಮೆಯುಳ್ಳ ಎಲೈ ಆರು ಮಂದಿ ದೇವಿಯರೇ, ನೀವು ನಮಗೆ ಹೆಚ್ಚಿನ ಹಣನ್ನು ಒದಗಿಸಿಕೊಡಿ. ವಿಶ್ವೇ ದೇವತೆಗಳೂ ಈ ವಿಷಯಲ್ಲಿ ನಮಗೆ ಸಹಾಯಕರಾಗಿರಲಿ. ನಾವು ಪುತ್ರಾದಿಗಳಿಲ್ಲದಂತಾಗದಿರಲಿ. ಮರಣವೂ ಸಂಭವಿಸದಿರಲಿ. ಎಲೈ ಸ್ವಾಮಿಯಾದ ಸೋಮನೇ, ನಮ್ಮನ್ನು ದ್ವೇಷಿಸುವ ಶತ್ರುಗಳ ಅಧೀನರಾಗಿ ಅವರಿಂದ ನಾವು ಕೊಲ್ಲಲ್ಪಡದಿರಲಿ.

ಅಗ್ನೇ ಮನ್ಯುಂ ಪ್ರತಿ ನುದನ್ಪರೇಷಾಮದಬ್ಧೋ ಗೋಪಾಃಪರಿಪಾಹಿ ನಸ್ತ್ವಂ।

ಪ್ರತ್ಯಂಚೋಯಂತು ನಿಗುತಃ ಪುನಸ್ತೇ ಮೈಷಾಂ

ಚಿತ್ತಂಪ್ರಬುಧಾಂ ವಿನೇಶತ್ ॥ 6 ॥

ಎಲೈ ಅಗ್ನಿಯೇ, ಶತ್ರುಗಳ ಕೋಪವನ್ನು ಲಕ್ಷ್ಯಮಾಡದೇ ತಿರಸ್ಕರಿಸು ವವನೂ ಯಾರ ಹಿಂಸೆಗೂ ಒಳಗಾಗದಿರುವವನೂ ಆದ ನೀನು ಸರ್ವತ್ರ ನಮ್ಮನ್ನು ರಕ್ಷಿಸು. ಪರಾಙ್ಮುಖರಾದ ಶತ್ರುಗಳು ಭಯದಿಂದ ಗೊಣ ಗುಟ್ಟುತ್ತಾ ಅಥವಾ ತೊದಲು ಮಾತುಗಳನ್ನಾಡುತ್ತಾ ತಮ್ಮ ಸ್ಥಾನಗಳಿಗೆ ಹಿಂತಿರುಗುವಂತಾಗಲಿ. ಯಾವಾಗಲೂ ಎಚ್ಚರಿಕೆಯಿಂದಿರುವ ಈ ಶತ್ರುಗಳ ವಿವೇಚನಾ ಶಕ್ತಿಯು ಕೂಡಲೇ ನಾಶವಾಗಲಿ.

ಧಾತಾ ಧಾತೃಣಾಂ ಭುವನಸ್ಯ ಯಸ್ಪತಿರ್ದೇವಂ ತ್ರಾತಾರಮಭಿಮಾತಿಷಾಹಂ।

ಇಮಂ ಯಜ್ಞಮಶ್ವಿನೋಭಾ ಬೃಹಸ್ಪತಿ ರ್ದೇವಾಃ ಪಾಂತು

ಯಜಮಾನಂ ನ್ಯರ್ಥಾತ್ ॥ 7 ॥

ಸೃಷ್ಟಿಕರ್ತರಾದ ದೇವತೆಗಳಿಗೂ ಯಾವನು ಸೃಷ್ಟಿಕರ್ತನೋ ಸಮಸ್ತ ಪ್ರಾಣಿ ಸಮೂಹಕ್ಕೂ ಯಾವನು ರಕ್ಷಕನೋ ಅಂತಹ ಪ್ರಕಾಶಕನೂ ಎಲ್ಲ ಭಯಗಳಿಂದ ರಕ್ಷಿಸುವವನೂ ಶತ್ರುಗಳನ್ನು ಪರಾಭವಗೊಳಿಸುವವನೂ ಆದ ಇಂದ್ರನನ್ನು ಅಥವಾ ಸವಿತೃದೇವನನ್ನು ಸ್ತುತಿಸುತ್ತೇನೆ. ಅಶ್ವಿನೀ ದೇವತೆಗಳಿಬ್ಬರೂ ಬೃಹಸ್ಪತಿಯೇ ಮೊದಲಾದ ಸಮಸ್ತ ದೇವತೆಗಳೂ ಈಗ ನಡೆಯುತ್ತಿರುವ ಈ ಯಜ್ಞವನ್ನೂ ಮತ್ತು ಯಜಮಾನನನ್ನೂ ಪಾಪರಹಿತರಾಗುವಂತೆ ಕಾಪಾಡಲಿ.

ಉರುವ್ಯಚಾ ನೋ ಮಹಿಷಶ್ಶರ್ಮಯಂಸ ದಸ್ಮಿನ್ಹವೇ ಪುರುಹೂತಃ ಪುರುಕ್ಷುಃ।

ಸ ನಃ ಪ್ರಜಾಯೈ ಹರ್ಯಶ್ವ ಮೃಳಯೇಂದ್ರ ಮಾನೋ

ರೀರಿಷೋ ಮಾಪರಾದಾಃ ॥ 8 ॥

ಸರ್ವವ್ಯಾಪಿಯೂ ಪೂಜ್ಯನೂ ಮಹಾಮಹಿಮನೂ ಅನೇಕರ ಆಹ್ವಾನಕ್ಕೆ ಪಾತ್ರನೂ ಅನೇಕ ವಾಸಸ್ಥಾನಗಳುಳ್ಳವನೂ ಅನೇಕರಿಂದ ಸ್ತುತ್ಯನೂ ಆದ ಇಂದ್ರನು ಈ ಯಜ್ಞದಲ್ಲಿ ನಮಗೆ ಸುಖವನ್ನುಂಟುಮಾಡಲಿ. ಹರೀ ಎಂಬ ಎರಡು ಕುದುರೆಗಳುಳ್ಳ ಎಲೈ ಇಂದ್ರನೇ ನೀನು ನಮಗೆ ಸಂತತಿಯನ್ನು ಕೊಟ್ಟು ಸುಖವಾಗಿರುವಂತೆ ಮಾಡು. ನಮ್ಮನ್ನು ಹಿಂಸಿಸಬೇಡ ಮತ್ತು ತ್ಯಜಿಸಬೇಡ.

ಯೇನ ಸ್ಸಪತ್ನಾ ಅಪತೇ ಭವಂತ್ಯಿಂದ್ರಾಗ್ನಿಭ್ಯಾಮವ ಬಾಧಾ ಮಹೇ ತಾನ್।

ವಸವೋ ರುದ್ರಾ ಆದಿತ್ಯಾ ಉಪರಿಸ್ಪೃಶಂ ಮೋಗ್ರಂ

ಚೇತ್ತಾರಮಧಿರಾಜ ಮಕ್ರನ್ ॥ ೯ ॥

ನಮ್ಮ ಶತ್ರುಗಳು ನಮ್ಮಿಂದ ಪರಾಜಿತರಾಗಿ ಹಿಂದಕ್ಕೆ - ಹೊರಟು ಹೋಗಲಿ. ಇಂದ್ರಾಗ್ನಿಗಳನ್ನೂ ಹವಿರಾದಿಗಳಿಂದ ಸ್ತುತಿಸಿ ಅವರ ಸಹಾದಿಂದ ನಾವು ಆ ಶತ್ರುಗಳನ್ನು ಹಿಂಸಿಸಿ ನಾಶಪಡಿಸುವಂತಾಗಲಿ, ಅಷ್ಟವಸುಗಳೂ ಏಕಾದಶರುದ್ರರೂ ದ್ವಾದಶಾದಿತ್ಯರೂ ಸಹ ನನ್ನನ್ನು ಸರ್ವಶ್ರೇಷ್ಠ ವನ್ನಾಗಿಯೂ, ಅಧಿಕ ಶಕ್ತಿಯುಳ್ಳವನನ್ನಾಗಿಯೂ, ಸರ್ವಜ್ಞನನ್ನಾಗಿಯೂ, ಸರ್ವರಿಗೂ ಒಡೆಯನನ್ನಾಗಿಯೂ ಮಾಡಲಿ.

ಅರ್ವಾಂಚಮಿಂದ್ರಮಮುತೋ ಹವಾಮಹೇ ಯೋಗೋಜಿದ್ಧನಜಿದಶ್ವಜಿದ್ಯಃ।

ಇಮಾನ್ನೋಯಜ್ಞಂ ವಿಹವೇ ಜುಷಸ್ವಾಸ್ಯ ಕುರ್ಮೋ ಹರಿವೋ ಮೇದಿನಂ ತ್ವಾ॥

ಈ ಸ್ವರ್ಗಲೋಕದಿಂದ ನಮಗೆ ಇಂದ್ರನನ್ನು ಅಭಿಮುಖನನ್ನಾಗಿ ಕರೆಯುತ್ತೇವೆ. ಯಾವ ಇಂದ್ರನು ಪಣಿಗಳಿಂದಪಹರಿಸಲ್ಪಟ್ಟ ಗೋವುಗಳನ್ನು ಜಯಿಸಿದನೋ, ಧನವನ್ನು ಜಯಿಸಿದನೋ, ಅಶ್ವಗಳನ್ನು ಜಯಿಸಿದನೋ ಹರಿದ್ವರ್ಣವುಳ್ಳ ಕುದುರೆಗಳ ಬಣ್ಣದಂತಿರುವ ಇಂದ್ರನೇ, ನಮ್ಮ ಈ ಯಜ್ಞದಲ್ಲಿ ಅನೇಕ ರೀತಿಯಲ್ಲಿ ನಿನ್ನನ್ನು ಆಹ್ವಾನಮಾಡುತ್ತಿರಲಾಗಿ ನೀನು ಪ್ರತ್ಯಕ್ಷನಾಗು. ಈ ಯಜ್ಞದಲ್ಲಿ ನಿನ್ನನ್ನು ನಾವು ಹೋಮ ಮಾಡುವ ಸಮಿತ್ತೇ ಮೊದಲಾದುವುಗಳಿಂದ ಆ ದ್ರವ್ಯಗಳ ರಸಾಂಶವುಳ್ಳವನನ್ನಾಗಿ ಮಾಡೋಣ. ಎಂಬುದಾಗಿ ಹತ್ತು ಸಮಿತ್ತುಗಳಿಂದ ಹೋಮ ಮಾಡಿ "ವಿಶ್ವೇಭ್ಯೋ ದೇವೇಭ್ಯೋ ನಮಮ" ಎಂದು ಉದ್ದೇಶ ತ್ಯಾಗವನ್ನು ಹೇಳಬೇಕು.

ಸಮಾವರ್ತನ ಹೋಮಾದಿಗಳನ್ನು ಮಾಡಿದ ನಂತರ

ತತಃ ಸ್ನಾತಕೋ "ನೈಮಿತ್ತಿಕಾದಿವಿನಾ, ನಕ್ತಂ ನಗ್ನಸ್ಸನ್ ನ ಸ್ನಾಸ್ಯಾಮಿ। ನಗ್ನಾಂ ಸ್ತ್ರಿಯಂ ನೇಕ್ಷೇ। ವರ್ಷತಿ ನ ಧಾವಾಮಿ। ವೃಕ್ಷಂ ನಾರೋಹಾಮಿ ಕೂಪಂ ನಾವರೋಹಾಮಿ। ಸಂಶಯಂ ನಾಭ್ಯಾಪದ್ಯೇ॥" ಎಂದರೆ, ಸ್ನಾತಕನ

"ರಾತ್ರಿಹೊತ್ತಿನಲ್ಲಿ ನಿರ್ವಾಣವಾಗಿ (ಬೆತ್ತಲೆ) ಸ್ನಾನ ಮಾಡುವುದಿಲ್ಲ ಬೆತ್ತಲೆ ಯಾದ ಸ್ತ್ರೀಯನ್ನು ನೋಡುವುದಿಲ್ಲ. ಮಳೆಯಲ್ಲಿ ಓಡುವುದಿಲ್ಲ. ಮರವನ್ನು ಹತ್ತುವುದಿಲ್ಲ. ಬಾವಿಯಲ್ಲಿ ಇಳಿಯುವುದಿಲ್ಲ. ಸಂದೇಹವುಳ್ಳವನಾಗಿ ಆಗುವು ದಿಲ್ಲ" ಎಂದು ಸಂಕಲ್ಪ ಮಾಡುತ್ತಾನೆ.

ಇಲ್ಲಿಗೆ ಸಮಾವರ್ತನ ಕರ್ಮವು ಮುಗಿಯಿತು.

ಇನ್ನು ಮುಂದೆ ವಿವಾಹಕರ್ಮಕ್ಕೆ ಪ್ರಾರಂಭವಾಗುವುದು.

ಈ ಷೋಡಶ ಕರ್ಮಗಳು ಮತತ್ರಯದವರಿಗೂ ಸಮಾನವಾಗಿದೆ. ಆದರೆ ಕೆಲವು ಸಂಪ್ರಯದಾಯದಲ್ಲಿ ವ್ಯತ್ಯಾಸವಿರಬಹುದು. ಸ್ಮಾರ್ತರು "ಶ್ರೀ ಪರಮೇಶ್ವರ ಪ್ರೀತ್ಯರ್ಥಂ" ಎಂತಲೂ, ಮಾಧ್ವರು, "ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಹರಿವಾಯು ಪ್ರೇರಣಯಾ ಶ್ರೀ ಲಕ್ಷ್ಮೀನಾರಾಯಣ ಪ್ರೀತ್ಯರ್ಥಂ" ಎಂತಲೂ, ಶ್ರೀ ವೈಷ್ಣವರು "ಶ್ರೀ ಭಗವದಾಜ್ಞಯಾ ಭಗವತ್ಪ್ರೀತ್ಯರ್ಥಂ" ಎಂತಲೂ ಸಂಕಲ್ಪವನ್ನು ಮಾಡುತ್ತಾರೆ.



# ಶ್ರೀ ಗಣೇಶ ಶಾರದಾನೃಸಿಂಹ ಗುರುಭ್ಯೋಃ ನಮಃ

ಗರ್ಭಾಷ್ಟಮದಲ್ಲಿ ಉಪನೀತನಾದ ಬ್ರಹ್ಮಚಾರಿಯು ಗುರುಕುಲದಲ್ಲಿ ಸಂಪೂರ್ಣವಾಗಿ ವಿದ್ಯಾಭ್ಯಾಸವನ್ನು ಮಾಡಿ ಆ ಗುರುವಿನ ಅಪ್ಪಣೆಯನ್ನು ಪಡೆದು ವ್ರತ ಚತುಷ್ಟಯವೆಂಬ ಕರ್ಮವನ್ನು ಮಾಡಿಕೊಂಡು ಸಮಾವರ್ತನೆಯನ್ನು ಮಾಡಿಕೊಳ್ಳಬೇಕು.

ಆ ಮೇಲೆ ವಿವಾಹವನ್ನು ಮಾಡಿಕೊಳ್ಳಬೇಕು. ಬುದ್ಧಿಮತೇ ಕನ್ಯಾಂ ಪ್ರಯಚ್ಛೇತ್" ವಿದ್ಯಾವಂತನಾದ ಬುದ್ಧಿವಂತನಾದ ವರನಿಗೆ ಕನ್ಯಾದಾನವನ್ನು ಮಾಡಬೇಕೆಂದು ಆಶ್ವಲಾಯನರು ಸೂತ್ರದಲ್ಲಿ ಹೇಳಿರುತ್ತಾರೆ.

ಕನ್ಯೆಯು ಯಾವ ರೀತಿ ಇರಬೇಕೆಂದೂ ಆ ಮಹಾತ್ಮರೇ ಹೇಳಿರುತ್ತಾರೆ. ಏನೆಂದರೆ "ಬುದ್ಧಿ, ರೂಪ, ಶೀಲ, ಲಕ್ಷಣ, ಸಂಪನ್ನಾಮರೋಗಾಮುಪಯಚ್ಛೇತ್" ಎಂದರೆ ಆ ಕನ್ಯೆಯು ಬುದ್ಧಿ. ರೂಪ, ನಡತೆ, ಲಕ್ಷಣಗಳುಳ್ಳ ಆರೋಗ್ಯವಂತಳಾದ ಕನ್ಯೆಯನ್ನು ದಾನಮಾಡಬೇಕೆಂದು ಹೇಳಿರುತ್ತಾರೆ.

ವಿವಾಹದಲ್ಲಿ ಎಂಟು ವಿಧಗಳುಂಟು. ಯಾವುವೆಂದರೆ, ಬ್ರಾಹ್ಮ, ದೈವ, ಪ್ರಾಜಾಪತ್ಯ, ಆರ್ಷ, ಗಾಂಧರ್ವ, ಆಸುರ, ಪೈಶಾಚ ಮತ್ತು ರಾಕ್ಷಸ. ಇವುಗಳಲ್ಲಿ ಬ್ರಾಹ್ಮ ಮತ್ತು ಗಾಂಧರ್ವ ಇವೆರಡೇ ಈಗ ಹೆಚ್ಚು ಬಳಕೆಯಲ್ಲಿವೆ.

"ಅಥ ಖಲೂಚ್ಚಾವಚ ಜನಪದ ಧರ್ಮಾ ಗ್ರಾಮಧರ್ಮಾಶ್ಚತಾನ್ ವಿವಾಹೇ ಪ್ರತೀಯಾತ್" ಎಂದು ಸೂತ್ರಕಾರರು ಹೇಳಿರುತ್ತಾರೆ. ಎಂದರೆ ಜನಗಳ ಸಂಪ್ರದಾಯವೂ ದೇಶಾಚಾರವೂ ಹೆಚ್ಚು ಕಡಿಮೆಯಾದರೂ ಬಾಧಕವಿಲ್ಲ. ದೋಷವಾಗುವುದಿಲ್ಲ. ಶಾಸ್ತ್ರಕ್ಕೂ ವಿರೋಧವಿಲ್ಲ. ಆದರೆ ಅದೇ ಸೂತ್ರಕಾರರು "ಯತ್ತು ಸಮಾನಂ ತದ್ವಕ್ಷ್ಯಾಮಃ" ಎಲ್ಲಾ ದೇಶಗಳಿಗೂ ಎಲ್ಲರ ಸಂಪ್ರದಾಯಕ್ಕೂ ಒಂದೇ ರೀತಿಯಾಗಿ ನಡೆಯಬೇಕಾದ್ದನ್ನು ಹೇಳುತ್ತೇವೆ. ಅದೇ ಶಾಸ್ತ್ರ ಸಮ್ಮತವಾದದ್ದು ಎಂದು ಮುಂದಿನ ಸೂತ್ರದಲ್ಲಿ ಹೇಳಿರುತ್ತಾರೆ.

"ಅಗ್ನ ಆಯೂಂಷಿಪವಸ ಇತಿ ತಿಸೃಭಿಃ ಪ್ರಜಾಪತೇ ನತ್ವದೇ ತಾನ್ಯನ್ಯ ಇತಿಚ, ವ್ಯಾಹೃತಿ ಭಿರ್ವಾ, ಸಮುಚ್ಚಯ ಮೆಕೇ ನ್ಯೆಕೇ ಕಾಂಚನ, ತ್ವಮ ರ್ಯಮಾ ಭವಸಿ ಯತ್ನನೀನಾ ಮಿತಿ ವಿವಾಹೇ ಚತುರ್ಥೀಂಃ". ಎಂದರೆ ಚೌಲೋಪನಯನಾದಿಗಳಲ್ಲಿ ಅಗ್ನಿಪವಮಾನ ಮೂರು ಮತ್ತು ಪ್ರಜಾಪತಿ. ಈ ನಾಲ್ಕು ಮಂತ್ರಗಳಿಂದ ಪ್ರಧಾನ ಹೋಮವನ್ನು ನಡೆಸಬೇಕು. ವಿವಾಹ ದಲ್ಲಿ ಮಾತ್ರ ಅಗ್ನಿಪವಮಾನ, 3. ತ್ವಮರ್ಯಮಾ ಎಂಬ ಅಗ್ನಿ ಪ್ರಜಾಪತಿ ಎಂದು ಒಟ್ಟು 5 ಮಂತ್ರಗಳಿಂದ ಪ್ರಧಾನ ಹೋಮವನ್ನು ಮಾಡಬೇಕು ಎಂದು ಹೋಮದ ವಿಷಯವನ್ನು ಮಾತ್ರ ಹೇಳಿರುತ್ತಾರೆ.

ಮನುಷ್ಯನು ಹುಟ್ಟುವಾಗಲೇ ದೇವ ಋಣ, ಋಷಿ ಋಣ. ಪಿತೃ ಋಣ ಎಂಬ ಋಣ ತ್ರಯಗಳನ್ನಿಟ್ಟುಕೊಂಡೇ ಹುಟ್ಟುತ್ತಾನೆ.

ವೇದಾಧ್ಯಯನವನ್ನು ಮಾಡಿ ದೇವತೆಗಳಿಗೆ, ಯಜ್ಞ ಯಾಗಾದಿಗಳನ್ನು ಮಾಡಿ ಹವಿಸ್ಸನ್ನರ್ಪಿಸುವುದರಿಂದ ದೇವಋಣವು ಕಳೆಯುತ್ತದೆ.

ಸಾವಿರಾರು ವರ್ಷಗಳು ತಪಸ್ಸನ್ನು ಮಾಡಿ ಆ ಋಷಿಗಳು ಕಂಡು ಹಿಡಿದ ಮಂತ್ರವನ್ನು ಅಧ್ಯಯನಮಾಡಿ ಅವರಿಗೆ ತರ್ಪಣಾದಿಗಳನ್ನು ಮಾಡಿದ್ದರಿಂದ ಋಷಿ ಋಣವು ತೀರುತ್ತದೆ.

ಜಾತಕ ಕರ್ಮದಲ್ಲಿ "ಪುತ್ರೇ ಜಾತಾಮಾತ್ರೇ ಪಿತಾ ತಸ್ಯ ಮುಖಮಾ ಲೋಕ್ಯ ನದ್ಯಾದಾವುದಙ್ಮುಖ ಸ್ಸಚೇಲ ಸ್ನಾನಂ ಕುರ್ಯಾತ್" ಎಂದು ಹೇಳಿದೆ. ಅದರಂತೆ ಮಕ್ಕಳು ಹುಟ್ಟಿದ್ದರಿಂದ ನಮಗೆ ಪಿಂಡೋದಕಗಳನ್ನು ಕೊಡುವ ಮಗನು ನಮ್ಮವಂಶದಲ್ಲಿ ಹುಟ್ಟಿರುವನೆಂದು ಪಿತೃಗಳು ಸಂತೋಷ ದಿಂದ ಆಶೀರ್ವಾದ ಮಾಡುತ್ತಾರೆ.

ಮನುಷ್ಯನ[illegible]ನು ಯಾವುದೊಂದು ಶುಭಕರ್ಮವನ್ನು ಮಾಡಬೇಕಾ ದರೂ ಮೊದಲು [illegible] ಶುದ್ಧಿ, ಆತ್ಮಶುದ್ಧಿ ಮತ್ತು ಪದಾರ್ಥಗಳ ಶುದ್ಧಿ ಗೋಸ್ಕರ ಪುಣ್ಯಾಹವನ್ನು ಮಾಡಬೇಕು.

**ಪುಣ್ಯಾಹ :** ಪುಣ್ಯಾಹದಲ್ಲಿ ಮೊದಲು ಗಣಪತಿಯನ್ನು ಪೂಜಿಸಿ, ತಾಯಿ ತಂದೆಗಳನ್ನು ನಮಸ್ಕರಿಸಿ, ಗುರು ಹಿರಿಯರ ಆಶೀರ್ವಾದವನ್ನು ಪಡೆದು ನಂತರ ಕಲಶದ್ವಯದಲ್ಲಿ ವರುಣನನ್ನು ಧ್ಯಾನಾವಾಹನಾದಿಗಳಿಂದ ಪೂಜಿಸಿ ಆ ಮಂತ್ರೋಕ್ತವಾದ ಉದಕಗಳಿಂದ ಸಮುದ್ರ ಜ್ಯೇಷ್ಠಾದಿ ಮಂತ್ರಗಳಿಂದ ಸ್ಥಳಕ್ಕೂ, ಯಜಮಾನರಿಗೂ ಬ್ರಾಹ್ಮಣರು ಪ್ರೋಕ್ಷಣೆಯನ್ನು ಮಾಡುತ್ತಾರೆ.
ಪುಣ್ಯೋದಕಗಳ ಮಂತ್ರಾರ್ಥ :

ಸಮುದ್ರಜ್ಯೇಷ್ಠಾಸ್ಸಲಿಲಸ್ಯಮಧ್ಯಾತ್ಪುನಾನಾ ಯಂತ್ಯನಿವಿಶಮಾನಾಃ ।

ಇಂದ್ರೋಯಾ ವಜ್ರಿ ವೃಷಭೋ ರರಾದ ತಾ ಆಪೋ ದೇವೀರಿಹ ಮಾಮ

ವಂತು॥

ಪ್ರಪಂಚವನ್ನು ಶುದ್ಧಿಗೊಳಿಸುವವೂ ತಡೆಯಿಲ್ಲದೇ ಹರಿಯುತ್ತಿರುವವೂ ಉತ್ತಮವಾದ ಆಶ್ರಯವನ್ನು ಪಡೆಯದಿರುವವೂ ಆದ ಉದಕಗಳು ಅಂತ-ರಿಕ್ಷದ ಮಧ್ಯಭಾಗದಿಂದ ಹರಿದು ಬರುತ್ತಿವೆ. ವಜ್ರಾಯುಧಧಾರಿಯೂ ಕಾಮ ವರ್ಷಕನೂ ಆದ ಇಂದ್ರನು ಯಾವ ಉದಕಗಳನ್ನು ಬಂಧನದಿಂದ ಬಿಡಿಸಿ ಹರಿಯುವಂತೆ ಮಾಡಿದನೋ ಅಂತಹ ದೇವತಾತ್ಮಕವಾದ ಉದಕಗಳು ಈ ಕರ್ಮದಲ್ಲಿ ನಿರತರಾದ ನಮ್ಮನ್ನು ರಕ್ಷಿಸಲಿ.

ಯಾ ಆಪೋ ದಿವ್ಯಾ ಉತವಾಸ್ರವಂತಿ ಖನಿತ್ರಿಮಾ ಉತವಾಯಾಸ್ಸ್ವಯಂ

ಜಾಃ । ಸಮುದ್ರಾರ್ಥಾ ಯಾ ಶ್ಶುಚಯಃ ಪಾವಕಾಸ್ತಾ ಆಪೋ ದೇವೀರಿಹ ಮಾಮ

ವಂತು॥

ಯಾವ ಉದಕಗಳು ಅಂತರಿಕ್ಷದಿಂದ ಆವಿರ್ಭವಿಸಿ ಪ್ರವಾಹಾತ್ಮಕವಾಗಿ ತಮ್ಮ ತಡೆಯನ್ನು ಸೀಳಿಕೊಂಡು ಹೊರಹೊರಟು ಹರಿಯುವುವೋ ತಾವೇ ತಾವಾಗಿ ಪ್ರಾದುರ್ಭವಿಸಿ ಸಮುದ್ರವನ್ನು ಸೇರುವುವೋ ಅಂತಹ ಪವಿತ್ರೋದಕಗಳು ಈ ಯಜ್ಞಕರ್ಮದಲ್ಲಿ ನಿರತರಾದ ನಮ್ಮನ್ನು ರಕ್ಷಿಸಲಿ.

ಯಾಸಾಂ ರಾಜವರುಣೋ ಯಾತಿಮಧ್ಯೇ ಸತ್ಯಾನೃತೇ ಅವಪಶ್ಯಂಜನಾನಾಂ

ಮಧುಶ್ಚುತಶ್ಶುಚಯೋ ಯಾಃ ಪಾವ ಕಾಸ್ತಾ ಆಪೋ =ಮಾಮವಂತು||

ಮಧ್ಯಮ ಲೋಕಸ್ಥನಾದ ವರುಣದೇವನು ಪ್ರಜೆಗಳ ಸತ್ಯ ಮತ್ತು ಅಸತ್ಯ ಜೀವನಗಳನ್ನು ನೋಡುತ್ತಾ ಪ್ರಭುವಾಗಿ ಸಂಚರಿಸುತ್ತಿರುವನೋ ಯಾವ ಉದಕಗಳು ಮಧುರವಾದ ರಸವನ್ನು ಹಿಂಡುತ್ತಲೂ ಪ್ರಕಾಶಮಾನವಾಗಿಯೂ ಶುದ್ಧಿಕಾರಕಗಳಾಗಿಯೂ ಇರುವುವೋ ಅಂತಹ ಪವಿತ್ರವಾದ ಉದಕಗಳು ನಮ್ಮನ್ನು ಸಕ್ಷಿಸಲಿ.

ಯಾಸು ರಾಜ ವರುಣೋ ಯಾಸು ಸೋಮೋ ವಿಶ್ವೇದೇವಾ ಯಾ ಸೂರ್ಜಂ

ಮದಂತಿ| ವೈಶ್ವಾನರೋ ಯಾ ಸ್ವಗ್ನಿಃ ಪ್ರವಿಷ್ಟಸ್ತಾ ಆಪೋ= ಮಾಮ ವಂತು

ಯಾವ ಉದಕಗಳಲ್ಲಿ ಪ್ರಭುವಾದ ವರುಣದೇವನು ಪ್ರಕಾಶಿಸುತ್ತಿರುವನೋ ಸೋಮದೇವನು ನೆಲೆಯಾಗಿರುವನೋ ಸಮಸ್ತ ದೇವತೆಗಳ ಅನ್ನವನ್ನು ಸವಿಯುವರೋ ಯಾವ ಉದಕಗಳಲ್ಲಿ ವೈಶ್ವಾನರ ರೂಪಿಯಾದ ಅಗ್ನಿಯು ಪ್ರವೇಶಿಸಿದ್ದನೋ ಅಂತಹ ಪವಿತ್ರೋದಕಗಳು ನಮ್ಮನ್ನು ರಕ್ಷಿಸಲಿ.

ತ್ರಾಯೇತಾ ಮಿಹ ದೇವಂಸ್ತ್ರಾಯತಾಂ ಮರುತಾಂ ಗಣಃ!

ತ್ರಾಯಂತಾಂ ವಿಶ್ವಾ ಭೂತಾನಿ ಯಥಾಯಮರಪಾ ಅಸತ್ ||

ಸಮಸ್ತದೇವತೆಗಳೂ ಮರುದ್ಗಣಗಳೂ ಈ ದೇಶದಲ್ಲಿ ನಮ್ಮನ್ನು ರಕ್ಷಿಸಲಿ ಈ ಶರೀರವು ಪಾಪರಹಿತವಾಗಿರುವಂತೆ ಸಮಸ್ತ ದೇವಮಾನವಾದಿ ಪ್ರಾಣಿ ವರ್ಗಗಳೆಲ್ಲವೂ ನಮ್ಮನ್ನು ಕಾಪಾಡಲಿ.

ಆಪ ಇದ್ವಾ ಉ ಭೇಷಜೀರಾಪೋ ಅಮೀವ ಚಾತನೀಃ |

ಆಪ ಸ್ಸರ್ವಸ್ಯ ಭೇಷಜೀಸ್ತಾ ಸ್ತೇ ಕೃಣ್ವಂತು ಭೇಷಜಂ ||

ಆ ಉದಕಗಳೇ ನಮಗೆ ಸ್ನಾನಪಾನಾದಿಗಳಿಗೆ ಸಾಧನವಾಗಿ ಸುಖಕರವಾಗಿವೆ. ಮತ್ತು ರೋಗಾದ್ಯುಪದ್ರವಗಳನ್ನು ನಾಶಮಾಡತಕ್ಕವುಗಳಾಗಿವೆ. ಈ ಉದಕಗಳೇ ಸಮಸ್ತ ಪ್ರಾಣಿವರ್ಗಕ್ಕೂ ಔಷಧಿಗಳಾಗಿವೆ. ಇಂತಹ ಉದಕಗಳು ನನ್ನ ವ್ಯಾಧಿಯನ್ನು ಹೋಗಲಾಡಿಸಿ ಸುಖವನ್ನುಂಟುಮಾಡಲಿ.

ಹಸ್ತಾಭ್ಯಾಂ ದಶ ಶಾಖಾಭ್ಯಾಂ ಜಿಹ್ವಾವಾಚಃ ಪುರೋಗವೀ |

ಅನಾಮಯಿತ್ನುಭ್ಯಾಂ ತ್ವಾ ತಾಭ್ಯಾಂ ತ್ವೋಪ ಸ್ಪೃಶಾಮಸಿ||

ವರ್ಣೋಚ್ಚಾರಣೆಗೆ ತಕ್ಕಂತೆ ನಾಲಿಗೆಯು ಚಲಿಸುತ್ತದೆ. ಅಂತಹ ಆ ನಾಲಿಗೆಯು ಹತ್ತು ಬೆರಳುಗಳಿಂದ ಕೂಡಿದ ಪ್ರಜಾಪತಿಯ ಎರಡು ಕೈಗೆಳಿಂದ ನಿರ್ಮಿತವಾಗಿದೆ. ಎಲೈ ಸ್ತೋತೃವೇ ಅಂತಹ ಪ್ರಜಾಪತಿಯ ಅನುಗ್ರಹ ರೂಪವಾದ ಕೈಗಳಿಂದ ನಿನಗೆ ಸುಖವುಂಟಾಗಲು ನಿನ್ನನ್ನು ಸ್ಪರ್ಶಿಸುತ್ತೇವೆ.

ಇಮಾಆಪಶ್ಶಿವತಮಾ ಇಮಾ ಸ್ಸರ್ವಸ್ಯ ಭೇಷಜೀಃ ।

ಇಮಾ ರಾಷ್ಟ್ರಸ್ಯವರ್ಧನೀರಿಮಾರಾಷ್ಟ್ರಭೃತೋಽಮೃತಾಃ ॥

ಈ ಉದಕಗಳು ಮಂಗಳಕರವಾದವುಗಳು ಸಮಸ್ತ ವ್ಯಾಧಿಗಳಿಗೂ ಔಷಧದಂತಿರುವವುಗಳು ರಾಷ್ಟ್ರದ ಅಭ್ಯುದಯವನ್ನು ಕೋರುವವುಗಳು. ಈ ಉದಕಗಳು ರಾಷ್ಟ್ರವನ್ನು ಧರಿಸಿರುವ ಅಮೃತಗಳು.

ಯಾಭಿರಿಂದ್ರ ಮಭ್ಯಷಿಂಚತ್ಪ್ರಜಾಪತಿ ಸ್ಸೋಮಂ ರಾಜಾನಂವರುಣಂ ಯಮಂ

ಮನುಂ। ತಾಭಿರದ್ಭಿ ರಭಿಷಿಂಚಾಮಿ ತ್ವಾಮಹಂ ರಾಜ್ಞಾಂತ್ವಮಧಿ

ರಾಜೋಭವೇ ಹ॥

ಪ್ರಜಾಪತಿಯು ಯಾವ, ಪುಣ್ಯೋದಕಗಳಿಂದ ರಾಜನಾದ ಸೋಮನನ್ನು ವರುಣನನ್ನು ಯಮನನ್ನೂ ಮನುವನ್ನೂ ಕೂಡಾ ಅಭಿಷೇಕ ಮಾಡಿದನೋ? ಅಂತಹ ಪುಣ್ಯೋದಕಗಳಿಂದ ನಾನು ನಿನ್ನನ್ನು ಅಭಿಷೇಕ ಮಾಡುತ್ತೇನೆ (ಇದೇ ವಿಚಾರವು ಐತರೇಯ ಬ್ರಾಹ್ಮಣದಲ್ಲೂ ಬರುತ್ತದೆ. ಪ್ರಜಾಪತಿಯು

ಇಂದ್ರನನ್ನು ಸಿಂಹಾಸನದಲ್ಲಿ ಕೂಡಿಸಿ ಅಭಿಷೇಕ ಮಾಡಿದನೆಂಬುದು; ನೀನು ರಾಜರಿಗೆಲ್ಲಾ ರಾಜನಾಗಿ ನಿಲ್ಲು–ಎಂದರೆ ಮಹಾ ಚಕ್ರವರ್ತಿಯಾಗೆಂದರ್ಥವು.

ಮಹಾಂತಂ ತ್ವಾಮಹೀನಾಂ ಸಮ್ರಾಜಂ ಚರ್ಷಣೀನಾಂ। ದೇವಿ
ಜನಿತ್ರ್ಯಜೀಜನದ್ಭದ್ರಾಜನಿತ್ರ್ಯ ಜೀಜನತ್॥

ದೇವತೆಗಳಿಗೆಲ್ಲಾ ಅಧಿಕನಾದವನೂ ಮನುಷ್ಯರಿಗೆ ಸ್ವಾಮಿಯಾದವನೂ ಆದ ಇಂತಹ ನಿನ್ನನ್ನು ದೇವಾತ್ಮಳಾದ ಅದಿತಿಯು ಪ್ರಸವಿಸಿದಳು. ಈ ಕಾರಣದಿಂದಲೇ ಅದಿತಿಯು ಸ್ತೋತ್ರಾರ್ಹಳಾದಳು.

## ನಾಂದಿ

ಚಂದ್ರಿಕಾಯಾಂ ವಿಷ್ಣು ಪುರಾಣೇ :–
ಕನ್ಯಾಪುತ್ರ ವಿವಾಹೇಷು ಪ್ರವೇಶೇ ನವವೇಶ್ಮನಃ
ನಾಮಕರ್ಮಣಿ ಬಾಲಾನಾಂ ಚೂಡಾಕರ್ಮಾದಿಕೇ ತಥಾ॥
ಸೀಮಂತೋನ್ನಯನೇಚೈವ ಪುತ್ರಾದಿ ಮುಖ ದರ್ಶನೇ ।
ನಾಂದೀಮುಖಾಃ ಪಿತೄನಾದೌ ತರ್ಪಯೇತ್ಪ್ರಯತೋ ಗೃಹೀ॥
ನಾನಿಷ್ಟ್ವಾ ಪಿತ್ರಯಜ್ಞೇನ ವೈದಿಕಂ ಕಿಂಚಿದಾಚರೇದಿತಿ।

ಅತ್ರಾಶ್ವಲಾಯನಃ ಸ್ಮೃತಿರೂಪೇಣಾಹ ;– ಕಾರ್ಯಮಾಭ್ಯುದಯ ಶ್ರಾದ್ಧಂ ಶ್ರೌತೇ ಸ್ಮಾರ್ತೇಚ ಕರ್ಮಣಿ॥ ಏವಮೇವ ನಾಂದೀಕರಣ ವಿಷಯೇ ಪುರಾಣೇಷು ಧರ್ಮ ಶಾಸ್ತ್ರೇಷು ಚ ಬಹುಭಿಃ ಮಹರ್ಷಿಭಿಃ ವ್ಯಾಖ್ಯಾತಂ॥

ನಾಂದಿಯನ್ನು ಮಾಡದೇ ಯಾವ ಶುಭಕರ್ಮಗಳನ್ನೂ ಮುಂದುವರಿಸಬಾರದೆಂದು ಪುರಾಣಗಳಲ್ಲಿಯೂ ಧರ್ಮಶಾಸ್ತ್ರಗಳಲ್ಲಿಯೂ ಅನೇಕ ಮಹರ್ಷಿಗಳಿಂದ ಹೇಳಲ್ಪಟ್ಟಿದೆಯಾದ್ದರಿಂದ ಕರ್ಮಾರಂಭದಲ್ಲಿ ಪುಣ್ಯಾಹ

ವಾಗುತ್ತಲೇ ನಾಂದಿಯನ್ನು ಮಾಡಬೇಕು. ಕ್ರಮವೇನೆಂದರೆ "ಗೌರಿ ಪದ್ಮಾ ಶಚೀ ಮೇಧಾ ಸಾವಿತ್ರೀ ವಿಜಯಾ ಜಯಾ ದೇವಸೇನಾಸ್ವಧಾ ಸ್ವಾಹಾ ಮಾತೃ ಲೋಕಮಾತೃ ಧೃತಿ ಪುಷ್ಟಿ ತುಷ್ಟಿ ಕುಲದೇವತೆ ಬ್ರಾಹ್ಮೀ ಮಾಹೇಶ್ವರೀ ಕೌಮಾರೀ ವೈಷ್ಣವೀ ವಾರಾಹೀ ಇಂದ್ರಾಣೀ ಚಾಮುಂಡಾ ದುರ್ಗಾ ಗಣಪತಿ" ಈ ಇಪ್ಪತ್ತೈದು ದೇವತೆಗಳನ್ನು ಮೊದಲು ಪೂಜಿಸಿ ಆ ಮೇಲೆ ಮಾತೃವರ್ಗ ಪಿತೃವರ್ಗ ಸಪತ್ನೀಕ ಮಾತಾಮಹವರ್ಗಗಳಿಗೂ ಮೇಲ್ಕಂಡ ಗೌರ್ಯಾದಿ ದೇವತೆಗಳಿಗೂ ತರ್ಪಣವನ್ನು ಕೊಟ್ಟು ಅವರ ಅನುಗ್ರಹವನ್ನು ಸಂಪಾದಿಸ ಬೇಕು.

ಪುಣ್ಯಾಹ ನಾಂದಿಗಳಾದ ಮೇಲೆ ತನ್ನ ಇಷ್ಟದೇವತೆ ಮತ್ತು ಕುಲ ದೇವತಾ; ಮಂಟಪ ದೇವತೆಗಳನ್ನು ಪೂಜಿಸಬೇಕು.

ಆಮೇಲೆ ಆದಿತ್ಯಾದಿ ನವಗ್ರಹಗಳನ್ನು ಕ್ರಮವಾಗಿ ಪೂಜಿಸಿ ಹೋಮ ವನ್ನು ಮಾಡಿ ಅವರ ಅನುಗ್ರಹಕ್ಕೆ ಪಾತ್ರರಾಗಬೇಕು.

ಶ್ರೀರಾಮಚಂದ್ರನು ಸೀತಾದೇವಿಯನ್ನು ಹುಡುಕುತ್ತಾ ನವಪಾಷಾಣ ಕ್ಕೆ ಬಂದು ಅಲ್ಲಿ ಸಮುದ್ರ ಮಧ್ಯದಲ್ಲಿ ನವಗ್ರಹಗಳನ್ನು ಪ್ರತಿಷ್ಠೆಮಾಡಿ ಅವರ ಅನುಗ್ರಹಕ್ಕೆ ಪಾತ್ರನಾದ ವಿಷಯ ಈಗಲೂ ರಾಮೇಶ್ವರದಲ್ಲಿ ಪ್ರತ್ಯಕ್ಷ ವಾಗಿದೆ.

ಸಾಕ್ಷಾತ್ ಭಗವಂತನಾದ ಶ್ರೀರಾಮನೇ ನವಗ್ರಹಾದಿಗಳನ್ನು ಪೂಜಿ ಸಿದನೆಂದ ಮೇಲೆ ನಮ್ಮಂತಹ ಸಾಮಾನ್ಯ ಮನುಷ್ಯರು ಪೂಜಿಸದಿರುವುದು ಅಸಮ್ಮತವೇ ಸರಿ.

## ನವಗ್ರಹ ಪೂಜೆ ಮತ್ತು ಹೋಮವನ್ನು ಆಚರಿಸುವುದು

**ಕನ್ಯಾದಾನ : ಸಂಕಲ್ಪ**

ಜಾತಕರ್ಮಾದಿ ಸಂಸ್ಕಾರೈಃ ಸಂಸ್ಕೃತಾಯಾಃ....ನಕ್ಷತ್ರೇ....ರಾಶೌ ಜಾತಾಯಾಃ....ಕುಮಾರ್ಯಾಃ ನಾಮ್ನ್ಯಾಃ ಅನಾದಿ ಸಿದ್ಧ ಶ್ರುತಿ ಸ್ಮೃತಿ ಇತಿಹಾಸ ಶಿಷ್ಟಾಚಾರ ಪರಿಪ್ರಾಪ್ತ ಸಕಲ ಲೌಕಿಕ ವೈದಿಕ ಧರ್ಮಾಚರಣ ಪೂರ್ವಕ ಚಿರ ಕಾಲ ಸುವಾಸಿನೀತ್ವ ಸಿದ್ಧಿದ್ವಾರಾ ಶ್ರೀಪರಮೇಶ್ವರ ಪ್ರೀತ್ಯರ್ಥಂ ಅನೇನ ವರೇಣ ಅಸ್ಯಾಂ ಕನ್ಯಾಯಾಂ ಉತ್ಪಾದಯಿಷ್ಯಮಾಣ ಸಂತತ್ಯಾ ದ್ವಾದಶಾವರಾ‌ಃ ದ್ವಾದಶಪರಾ‌ಃ ಪುರುಷಾಂಶ್ಚ ಪವಿತ್ರೀಕರ್ತುಂ ಆತ್ಮನಶ್ಚ ಮತ್ಸ್ಯ ಪುರಾಣೋಕ್ತ ಪ್ರಕಾರೇಣ ಷೋಡಶ ಮಹಾದಾನಾಂತರ್ವರ್ತಿ ಸಾಲಂಕೃತ ಕನ್ಯಾದಾನಂ ಬ್ರಾಹ್ಮವಿವಾಹೋಕ್ತ ವಿಧಿನಾ ಕರ್ತುಕಾಮಃ ತದಂಗ ವಾಗ್ದಾನ ಪೂರ್ವಕಂ ವಾಙ್ನಿಶ್ಚಯಂ ಕರಿಷ್ಯೆ".

ಈಗ ಮೊದಲು ಕನ್ಯಾದಾತನು ಸಂಕಲ್ಪವನ್ನು ಮಾಡುತ್ತಾನೆ. ಜಾತಕರ್ಮಾದಿ ಸಂಸ್ಕಾರಗಳಿಂದ ಸಂಸ್ಕೃತಳಾದ...ನಕ್ಷತ್ರ...ರಾಶಿಯಲ್ಲಿ ಹುಟ್ಟಿದ...ಎಂಬ ಹೆಸರಿನ ನನ್ನ ಮಗಳಿಗೆ ಅನಾದಿಪರಂಪರೆಯಿಂದ ಬಂದ ಶ್ರುತಿ ಸ್ಮೃತಿ, ಇತಿಹಾಸ, ಶಿಷ್ಟಾಚಾರಗಳಿಂದ ಉಂಟಾಗುವ ಸಮಸ್ತ ಲೌಕಿಕ ವೈದಿಕ ಧರ್ಮಾನುಷ್ಠಾನಗಳ ಮೂಲಕ ಅನೇಕ ಕಾಲ ಸುಮಂಗಲಿಯಾಗಿ ಬಾಳುವಂತೆಯೂ ಶ್ರೀ ಪರಮೇಶ್ವರ ಪ್ರೀತ್ಯರ್ಥವಾಗಿಯೂ ಈ ವರನಿಂದ ಆ ಕನ್ಯೆಯಲ್ಲಿ ಹುಟ್ಟುವ ಸಂತತಿಯಿಂದ ಹಿಂದಿನ ಹನ್ನೆರಡು ತಲೆ ಮುಂದಿನ 12 ತಲೆ ಪಿತೃಗಳನ್ನೂ ತನ್ನನ್ನೂ ಸಹ ಪಾವನಗೊಳಿಸುವುದಕ್ಕಾಗಿ ಮತ್ಸ್ಯ ಪುರಾಣದಲ್ಲಿ ಹೇಳಿರುವ ಹದಿನಾರು ಮಹಾದಾನಗಳಲ್ಲಿ ಒಂದಾದ ಕನ್ಯಾದಾನವನ್ನು ಬ್ರಾಹ್ಮಣ ವಿವಾಹ ವಿಧಿಯಂತೆ ಮಾಡುತ್ತೇನೆ,

ವರನು ಮಾಡುವ ಸಂಕಲ್ಪ :–

ಮಮ ದೇವರ್ಷಿ ಪಿತೃಋಣಾ ಪಕರಣ ಹೇತು ಭೂತ ಧರ್ಮಪ್ರಜೋತ್ಪಾದನ ಸಿದ್ಧಿದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಕನ್ಯಾ ಪರಿಗ್ರಹಣಂ ಕರಿಷ್ಯೇ.

ದೇವತೆಗಳು ಋಷಿಗಳು ಪಿತೃಗಳು ಇವರುಗಳ ಋಣವನ್ನು ಕಳೆಯುವು ದಕ್ಕಾಗಿಯೂ, ಧರ್ಮ ಸಂತತಿಯ ಉತ್ಪತ್ತಿಗಾಗಿಯೂ ಕೂಡಾ ಕನ್ಯಾ ಪರಿಗ್ರಹಣವನ್ನು ಮಾಡುತ್ತೇನೆ.

ವಾಙ್ನಿಶ್ಚಯ :- "ಮದರ್ಥಂ ಕನ್ಯಾಂ ವೃಣೀಧ್ವ" ಮಿತಿ ವರೋ ವೃಣು ಯಾತ್ ನನಗೋಸ್ಕರ ಕನ್ಯೆಯನ್ನು ಕೇಳಿರೆಂದು, ವರನು ಬ್ರಾಹ್ಮಣರನ್ನು ಪ್ರಾರ್ಥಿಸ ಬೇಕು.

ಅನೃಕ್ಷರಾ ಋಜವಸ್ಸಂತು ಪಂಥಾಯೇಭಿಸ್ಸಖಾಯೋಯಂತಿ ನೋ

ವರೇಯಂ| ಸಮರ್ಯಮಾ ಸಂಭಗೋನೋ ನಿನೀಯಾತ್ಸಂಜಾಸ್ಪತ್ಯಂ

ಸುಯಮಮಸ್ತು ದೇವಾ ః||

"ನಮ್ಮ ಮಿತ್ರರು ಯಾವ ಮಾರ್ಗಗಳಿಂದ ವರರಿಂದ ಪಾರ್ಥಿಸಲ್ಪಡುವ ಕನ್ಯಾಪಿತನ ಬಳಿಗೆ ಹೋಗುವರೋ ಅಂತಹ ಮಾರ್ಗಗಳು ಕಂಟಕ ರಹಿತವಾಗಿ ಯೂ ವಕ್ರವಿಲ್ಲದೆಯೂ ಇರಲಿ ಅರ್ಯಮ ದೇವನು ನಮ್ಮನ್ನು ಸರಿಯಾಗಿ ಕರೆದೊಯ್ಯಲಿ, ಭಗವಂತನು ನಮಗೆ ಸರಿಯಾದ ಮಾರ್ಗವನ್ನು ತೋರಿಸಲಿ, ಎಲೈ ದೇವತೆಗಳಿರಾ ದಂಪತಿಗಳ ಪರಸ್ಪರ ಸಂಬಂಧವು ಶ್ರೇಷ್ಠವಾಗಿ ಹೊಂದಿ ಕೊಳ್ಳಲಿ" ಎಂದು ಬ್ರಾಹ್ಮಣರು ವರ ಪೂರ್ವಕವಾಗಿ ಗೋತ್ರಪ್ರವರಾದಿ ಗಳನ್ನು ಹೇಳಿದಾಗ ಕನ್ಯಾದಾತನು, "ಕೇಳಿ ಕೊಡುತ್ತೇನೆ" ಎಂದು ತನ್ನ ಕುಲ ಗೋತ್ರಗಳನ್ನು ಬ್ರಾಹ್ಮಣರಿಂದ ಹೇಳಿಸಬೇಕು. ಈ ರೀತಿ ಮೂರಾವರ್ತಿಯಾದ ಮೇಲೆ ಕನ್ಯಾದಾತನು ವರಪಿತನನ್ನು ಗಂಧ ಪುಷ್ಪಾದಿ ಗಳಿಂದ ಸತ್ಕರಿಸಿ ವಾಚಾದತ್ತಾ ಮಯಾ ಕನ್ಯಾಪುತ್ರಾರ್ಥಂಸ್ವೀಕೃತಾ ತ್ವಯಾ ಕನ್ಯಾವ ಲೋಕನ ವಿಧೌ ನಿಶ್ಚಿತಸ್ತ್ವಂ ಸುಖೀಭವ" ಮಾತಿನ ಮೂಲಕ ನಿನ್ನ ಮಗನಿಗೆ ನನ್ನ ಮಗಳನ್ನು ಕೊಟ್ಟಿರುತ್ತೇನೆ. ಕನ್ಯೆಯನ್ನು ನೋಡುವುದರಲ್ಲಿ ನಿಶ್ಚಿಂತನಾಗಿದ್ದು ಸುಖವಾಗಿರು" ಎಂಬು ಹೇಳಿ ಫಲ ತಾಂಬೂಲವನ್ನು ಕೊಡುವನು,

ಕತೋ ಬ್ರಾಹ್ಮಣಾಃ ಸಮಾನೀವ ಆಕೂತಿಃ ಪ್ರಸುಗ್ಮಂತಾ ಧಿಯಸಾಸಕ್ಷಣಿ" ಇತ್ಯೇತೇ ಪಠೇಯುಃ

ವರಪಿತನೂ ಸಹ "ವಾಚಾ ದತ್ತಾ ತ್ವಯಾ ಕನ್ಯಾ ಪುತ್ರಾರ್ಥಂ ಸ್ವೀಕೃತಾ ಮಯಾ। ವರಾವಲೋಕನ ವಿಧೌ ನಿಶ್ಚಿತಸ್ತ್ವಂ ಸುಖೀ ಭವ" ಎಂದರೆ, ಮಾತಿನ ಮೂಲಕ ನಿನ್ನ ಮಗಳು ನನ್ನ ಮಗನಿಗೋಸ್ಕರ ಸ್ವೀಕರಿಸ ಲ್ಪಟ್ಟಿರುತ್ತಾಳೆ. ವರನನ್ನು ನೋಡುವಿಕೆಯಲ್ಲಿ ನಿಶ್ಚಿಂತನಾಗಿ ಸುಖವಾಗಿರು ಎಂದು ಕನ್ಯಾದಾತನಿಗೆ ಫಲತಾಂಬೂಲಾದಿಗಳನ್ನು ಕೊಡುವನು।

ಇದಾದ ಮೇಲೆ ಬ್ರಾಹ್ಮಣರು ಸಮಾನೀವ ಆಕೂತಿಃ ಪ್ರಸುಗ್ಮಂತಾ ಎಂಬ ಮಂತ್ರಗಳನ್ನು ಪಠಿಸುವರು.

ಸಮಾನೀವ ಆಕೂತಿ ಸ್ಸಮಾನಾ ಹೃದಯಾನಿವಃ ।

ಸಮಾನಮಸ್ತು ವೋ ಮನೋಯಥಾವಸ್ಸು ಸಹಾ ಸತಿ॥

ಮಂತ್ರಾರ್ಥ : ಎಲೈ ಋತ್ವಿಗ್ಯಜಮಾನರೇ, ನಿಮ್ಮಲ್ಲಿ ಪರಸ್ಪರ ಐಕಮತ್ಯ ವಿರುವುದಕ್ಕಾಗಿ ನಿಮ್ಮ ಉದ್ದೇಶವೂ ನಿಮ್ಮ ಇಷ್ಟಾರ್ಥಗಳೂ ನಿಮ್ಮ ಮನ ಸ್ಸಿನ ಆಲೋಚನೆಗಳೂ ಸಹ ಪರಸ್ಪರ ವಿರೋಧವಿಲ್ಲದಂತೆ ಒಂದೇ ಸಮನಾಗಿರಲಿ. ಎಂದರೆ ನಿಮ್ಮಿಬ್ಬರ ಮನಃಪ್ರವೃತ್ತಿಯು ಒಟ್ಟು ಗೂಡಿರಲಿ.

ಪ್ರಸುಗ್ಮಂತಾ ಧಿಯಸಾನಸ್ಯ ಸಕ್ಷಣಿ ವರೇಭಿರ್ವರಾಙ್ ಅಭಿಷು

ಪ್ರಸೀದತಃ । ಅಸ್ಮಾಕ ಮಿಂದ್ರ ಉಭಯಂ ಜು ಜೋಷತಿ ಯತ್ಸೋಮ್ಯ

ಸ್ಯಾಂಧಸೋ ಬುಬೋಧತಿ॥

ಇಂದ್ರನನ್ನೇ ಧ್ಯಾನಿಸುವ ಯಜಮಾನನ;ಯಜ್ಞ ನಿಮಿತ್ತವಾಗಿ ಹೋಗುವ ಕುದುರೆಗಳನ್ನು ಇಂದ್ರನು ಪ್ರೇರಿಸಿ ಕಳುಹಿಸಲಿ. ಉತ್ತಮವಾದ ಮಾರ್ಗ

ಗಳಿಂದ ಇಂದ್ರನನ್ನು ಪೂಜಿಸುವ ಯಜಮಾನನ ಶ್ರೇಷ್ಠವಾದ ಸ್ತುತಿಗಳಿಗೆ ಅಭಿಮುಖನಾಗಿ ಇಂದ್ರನು ಬರಲಿ. ಯಾವಾಗ ಇಂದ್ರನು ಸೋಮವಂತನಾದ ನನ್ನ ಹವಿಸ್ಸನ್ನರಿತು ರುಚಿ ನೋಡುವನೋ ಆಗ ಇಂದ್ರನು ನಮ್ಮಿಂದ ಅರ್ಪಿಸಲ್ಪಟ್ಟ ಹವಿಸ್ಸನ್ನೂ ಮತ್ತು ಸ್ತುತಿಗಳನ್ನೂ ಸೇವಿಸುತ್ತಾನೆ.

**ಶಚೀಪೂಜೆ** : ಅಥ ದಾತಾ ಪಾತ್ರಸ್ಥ ಸಿತ ತಂಡುಲ ಪುಂಜೇಷು ದಾತಾ ಶಚೀ ಪೂಜಾಂ ಕುರ್ಯಾತ್, ಕನ್ಯಾದಾತನು ತ್ರೈಲೋಕ್ಯ ವಲ್ಲಭಾಂ ದಿವ್ಯಾಂ ಗಂಧ ಮಾಲ್ಯಾಂಬರಾನ್ವಿತಾಂ। ಸರ್ವಲಕ್ಷಣ ಸಂಪೂರ್ಣಾಂ ಸರ್ವಾಭರಣ ಭೂಷಿತಾಂ। ಅನರ್ಘಮಣಿ ಮಾಲಾಭಿ ರ್ಭಾಸಯಂತೀಂ ದಿಗಂತರಂ | ವಿಲಾಸಿನೀ ಸಹಸ್ರೌಘೈ ಸ್ಸೇವ್ಯಮಾನಾ ಮಹರ್ನಿಶಂ ||. ಎಂದು ಇಂದ್ರ ಪತ್ನಿಯಾದ ಶಚೀದೇವಿಯನ್ನು ಪೂಜಿಸುತ್ತಾನೆ. ಪ್ರಾರ್ಥನಾ ಮಂತ್ರವನ್ನು "ದೇವೇಂದ್ರಾಣಿ ನಮಸ್ತುಭ್ಯಂ ದೇವೇಂದ್ರ ಪ್ರಿಯ ಭಾಮಿನಿ। ವಿವಾಹಂ ಭಾಗ್ಯಮಾರೋಗ್ಯಂ ಪುತ್ರಲಾಭಂ ಚ ದೇಹಿಮೇ || ।

ಎಂಬುದಾಗಿ (ಇಂದ್ರ ಪತ್ನಿಯಾದ ಶಚೀದೇವಿಯೇ ನನಗೆ ವಿವಾಹವಾಗುವಿಕೆಯನ್ನೂ, ಸೌಭಾಗ್ಯವನ್ನೂ, ಆರೋಗ್ಯವನ್ನೂ ಮತ್ತು ಸಂತಾನವನ್ನೂ ಕೊಟ್ಟು ಕಾಪಾಡು") ಕನ್ಯೆಯಿಂದ ಹೇಳಿಸಬೇಕು.

**ಮಧುಪರ್ಕ** : "ಋತ್ವಿಜೋ ಮಧುಪರ್ಕ ಮಾಹರೇತ್। ಸ್ನಾತಕಾಯೋಪಸ್ಥಿತಾಯ। ರಾಜ್ಞೇಚಾ ಚಾರ್ಯಾಯ ಚ। ಶ್ವಶುರ ಪಿತೃವ್ಯ ಮಾತುಳಾನಾಂ ಚ" ಎಂದು ಸೂತ್ರಕಾರರು ಹೇಳಿರುತ್ತಾರೆ. ಯಜ್ಞಯಾಗಾದಿಗಳು ನಡೆಯುವಾಗ ಋತ್ವಿಕರಿಗೂ, ಸ್ನಾತಕನಿಗೆ, ರಾಜನಿಗೆ, ಆಚಾರ್ಯನಿಗೆ ಹೆಣ್ಣು ಕೊಟ್ಟಮಾವ, ಚಿಕ್ಕಪ್ಪ ದೊಡ್ಡಪ್ಪಂದಿರು, ಸೋದರಮಾವ, ಇವರೆಲ್ಲರಿಗೂ ಮಧುಪರ್ಕವನ್ನು ಕೊಡಬೇಕು. ಪ್ರಕೃತ ವರನಿಗೆ ಮಧುಪರ್ಕವಾಗಬೇಕು.

ಸಮಾವರ್ತನೆಯಾದ ನಂತರ ವಿವಾಹಕ್ಕಾಗಿ ಬಂದ ವರನಿಗೆ ಮಧುಪರ್ಕವನ್ನು ಅವನ ಶಾಖೆಯಿಂದಲೇ ಕೊಡಬೇಕು.

ಅಥದಾತಾ ಪ್ರಾಣಾನಾಯಮ್ಯ,

ಕನ್ಯಾರ್ಥಿನೇ ಗೃಹಮಾಗತಾಯ ಅಸ್ಮೈಸ್ನಾತಕಾಯ ವರಾಯ ಕನ್ಯಾದಾನಾಂಗಂ ಮಧುಪರ್ಕಂ ವರಾಶಾಖೋಕ್ತ ವಿಧಿನಾ ಕರಿಷ್ಯೇ" ಕನ್ಯಾದಾತನು ಮೊದಲು ಸಂಕಲ್ಪಮಾಡಿ ವರನಿಗೆ ಕುಳಿತು ಕೊಳ್ಳುವ ಆಸನ ಕ್ಕೋಸ್ಕರ ಇಪ್ಪತ್ತೈದು ದರ್ಭೆಗಳಿಂದ ಗಂಟು ಹಾಕಲ್ಪಟ್ಟ ವಿಷ್ಟರವೆಂಬ ಆಸನವನ್ನು ಕೊಡುತ್ತಾನೆ. ವರನು ಅದನ್ನು ತೆಗೆದುಕೊಂಡು ಆ ಗಂಟನ್ನು ಬಿಚ್ಚಿ ತನ್ನ ಮಣೆಯ ಕೆಳಗೆ ಹಾಕಿ ಕೊಳ್ಳುತ್ತಾನೆ.

ಮಂತ್ರ : ಅಹಂ ವರ್ಷ್ಮ ಸಜಾತಾನಾಂ ವಿದ್ಯುತಾಮಿವಸೂರ್ಯಃ । ಇದಂ

ತಮಧಿತಿಷ್ಠಾಮಿ ಯೋಮಾಕಶ್ಚಾಭಿದಾಸತಿ॥

ಮಂತ್ರಾರ್ಥ : ಪ್ರಕಾಶವನ್ನುಂಟುಮಾಡುವ ಜ್ಯೋತಿಗಳಿಗೆ ಸೂರ್ಯನು ಹೇಗೆ ಪ್ರಧಾನ ಭೂತನೋ ಹಾಗೆ ಸಮಾನರಾದ ಮನುಷ್ಯರಿಗೆ ನಾನು ಪ್ರಧಾನ ಭೂತನಾಗಿ ನಿಲ್ಲುತ್ತೇನೆ. ಎಂದರೆ ಈ ವಿಷ್ಟರದ ಮೇಲೆ ನಾನು ಕುಳಿತಿದ್ದರಿಂದ ಶತ್ರುಗಳು ನಾಶರಾಗುವುದಲ್ಲದೇ ನಾನು ಎಲ್ಲರಿಗಿಂತಲೂ ಮೇಲಾಗಿರುತ್ತೇನೆ.

ಕನ್ಯಾದಾತನು ವರನಿಗೆ ಪಾದಗಳನ್ನು ತೊಳೆಯುತ್ತಾನೆ. ಪಾದಪ್ರಕ್ಷಾಳನೆಯಾದ ನಂತರ ವರನು ಆಚಮನವನ್ನು ಮಾಡುತ್ತಾನೆ.

ಕನ್ಯಾದಾತನು ಪಾದ್ಯಾನಂತರ ಅರ್ಘ್ಯವನ್ನು ಮೂರಾವರ್ತಿ ಕೊಡುತ್ತಾನೆ. ಆಮೇಲೆ ಆಚಮನ ಪಾತ್ರೆಯಿಂದ "ಅಮೃತೋಪಸ್ತರಣಮಸಿ" ಎಲೈ ಅಮೃತವೇ ನೀನು ಮುಚ್ಚಳವನ್ನು ತೆಗೆದಂತಿದ್ದೀಯೆ" ಎಂದು ಮಂತ್ರವನ್ನು ವರನು ಹೇಳಿ ಆಪೋಶನವನ್ನು ತೆಗೆದುಕೊಳ್ಳುತ್ತಾನೆ.

ಕನ್ಯಾದಾತನು ವರನಿಗೆ ಮಧುಪರ್ಕದ ಪಾತ್ರೆಯನ್ನು ಕೊಡುತ್ತಾನೆ.

ವರನು ಅದನ್ನು "ಮಿತ್ರಸ್ಯತ್ವಾ ಚಕ್ಷುಷಾ ಪ್ರತೀಕ್ಷೇ", ಸ್ನೇಹಿತನಂತಿರುವ "ನಿನ್ನನ್ನು ನನ್ನ ಕಣ್ಣುಗಳಿಂದ ನೋಡುತ್ತೇನೆ" ಎಂದು ಹೇಳಿ

ಧೇವಸ್ಯ ತ್ವಾ ಸವಿತುಃ ಪಸವೇಽಶ್ವಿನೋ ರ್ಬಾಹುಭ್ಯಾಂಪೂಷ್ಣೋ ಹಸ್ತಾ

ಭ್ಯಾಂ ಪ್ರತಿ ಗೃಹ್ಣಾಮಿ||

ಸವಿತೃದೇವತೆಯ ಪ್ರಸವಕ್ಕೋಸ್ಕರ ಅಶ್ವಿನೀ ದೇವತೆಗಳು ಭುಜಗಳಿಂದ ಪೂಷ ದೇವತೆಯು ಕೈಗಳಿಂದ ತೆಗೆದುಕೊಳ್ಳುತ್ತೇನೆಂದು ಹೇಳಿ ಆ ಪಾತ್ರೆಯನ್ನು ತೆಗೆದುಕೊಂಡು ತನ್ನ ಎಡಕೈಯಲ್ಲಿಟ್ಟುಕೊಂಡು ಆ ಮಧುಪರ್ಕವನ್ನು ಬಗ್ಗಿ ನೋಡಿ.

ಮಧುವಾತಾ :- ಮಾಧ್ವೀರ್ಗಾವೋ ಭವಂತುನಃ|| ಎಂಬ ಮೂರು ಮಂತ್ರಗಳನ್ನು ಪಠಿಸಿದ ನಂತರ

1. ಯಜ್ಞವನ್ನು ಮಾಡಲಿಚ್ಛಿಸುವ ಯಜಮಾನನಿಗೆ ವಾಯುಗಳು ಮಧುರವಾದ ಕರ್ಮಫಲಗಳನ್ನು ಸುರಿಸುತ್ತವೆ. ಪ್ರವಾಹ ರೂಪವುಳ್ಳ ನದಿಗಳು ತಮ್ಮ ಮಧುರವಾದ ರಸವನ್ನು ಹರಿಸುತ್ತವೆ. ಯಜ್ಞಕರ್ತರಾದ ನಮಗೆ ಸಸ್ಯಾದಿಗಳೂ ಮೂಲಿಕೆಗಳೂ ಮಾಧುರ್ಯದಿಂದ ಕೂಡಿದವುಗಳಾಗಿ ಆಗಲಿ.

2. ಅಹೋರಾತ್ರಿಗಳಲ್ಲೂ ಮಾಧುರ್ಯದಿಂದ ಕೂಡಿದ ಫಲಪ್ರದಗಳಾಗಲಿ ಪಾರ್ಥಿವ ಲೋಕವೆಲ್ಲವೂ ನಮಗೆ ಮಧುರವಾದ ಫಲವುಳ್ಳದ್ದಾಗಲಿ. ವೃಷ್ಟಿ ಪ್ರದಾನದಿಂದ ಸಮಸ್ತರಿಗೂ ರಕ್ಷಕವಾದ ದ್ಯುಲೋಕವೂ ಕೂಡಾ ಮಾಧುರ್ಯದಿಂದ ಕೂಡಿರಲಿ.

3. ವನಸ್ಪತಿ ದೇವನು ನಮಗೆ ಮಾಧುರ್ಯದಿಂದ ಕೂಡಿದ ಫಲಪ್ರದನಾಗಿ ಆಗಲಿ. ಸೂರ್ಯನು ನಮ್ಮ ಭಾಗಕ್ಕೆ ಮಧುರನಾಗಿರಲಿ. ಗೋವುಗಳೂಕೂಡಾ ನಮ್ಮ ಭಾಗಕ್ಕೆ ಮಾಧುರ್ಯವುಳ್ಳವುಗಳಾಗಿ ಆಗಲಿ.

ನಂತರ ಉಂಗುರದಿಂದ ಅದನ್ನು ಕಲಕಿ ವಸವಸ್ತ್ವಾ ಗಾಯತ್ರೇಣ ಛಂದಸಾ ಭಕ್ಷಯಂತು; ಎಲೈ ಮಧುವೇ ಪ್ರಾತಸ್ಸವನದಲ್ಲಿ ಅಷ್ಟವಸುಗಳು ಗಾಯಿತ್ರಿ ಛಂದಸ್ಸಿನಿಂದ ನಿನ್ನನ್ನು ಭಕ್ಷಿಸಲಿ. ರುದ್ರಾಸ್ತ್ವಾತ್ರೈಷ್ಟುಭೇನಛಂದ ಸಾ ಭಕ್ಷಯಂತು; ಮಾಧ್ಯಂದಿನ ಸವನದಲ್ಲಿ ಏಕಾದಶ ರುದ್ರರು ತ್ರಿಷ್ಟುಪ್ ಛಂದಸ್ಸಿನಿಂದ ನಿನ್ನನ್ನು ಭಕ್ಷಿಸಲಿ. ಅದಿತ್ಯಾಸ್ತ್ವಾ ಜಾಗತೇನ ಛಂದಸಾ ಭಕ್ಷಯಂತು ತೃತೀಯ ಸವನದಲ್ಲಿ ಜಗತೀ ಛಂದಸ್ಸಿನಿಂದ ದ್ವಾದಶಾದಿತ್ಯರು ನಿನ್ನನ್ನು ಭಕ್ಷಿಸಲಿ. ವಿಶ್ವೇತ್ವಾ ದೇವಾ ಆನುಷ್ಟುಭೇನ ಛಂದಸಾ ಭಕ್ಷಯಂತು ಇದೇ ತೃತೀಯ ಸವನದಲ್ಲಿಯೇ ವಿಶ್ವೇದೇವತೆಗಳು ಅನುಷ್ಟುಪ್ ಛಂದಸ್ಸಿನಿಂದ ನಿನ್ನನ್ನು ಭಕ್ಷಿಸಲಿ" ಎಂದು ಹೇಳುತ್ತಾ ನಾಲ್ಕು ದಿಕ್ಕುಗಳ ಕಡೆಗೂ ಪ್ರೋಕ್ಷಿಸುತ್ತಾನೆ. ಮತ್ತೆ ಭೂತೇಭ್ಯಸ್ತ್ವಾ ಯಕ್ಷರಾಕ್ಷಸಾದಿಗಳಿಗೆಲ್ಲಾ ನಿನ್ನನ್ನು ಕೊಡುತ್ತೇನೆ ಎಂದು ಹೇಳಿ ನೆಲದ ಮೇಲೂ ಆಕಾಶಕ್ಕೂ ಕೊಡವಿ ಆ ಪಾತ್ರೆಯನ್ನು ನೆಲದ ಮೇಲಿಡುತ್ತಾನೆ.

ನಂತರ ಮಧುಪರ್ಕದ ಸ್ವಲ್ಪ ಭಾಗವನ್ನು ತೆಗೆದುಕೊಂಡು ವಿರಾಜೋ ದೋಹೋಸಿ, ನೀನು ಅನ್ನದ ಸಾರಭೂತವಾಗಿದ್ದೀಯೆ ಎಂದು ಹೇಳಿ ಪ್ರಾಶನೇ ಮಾಡಿ ಆಚಮನ ಮಾಡುತ್ತಾನೆ.

"ವಿರಾಜೋ ದೋಹಮಶೀಯ" ಎಂದು ಎರಡನೇ ಸಲ ಅಂತಹ ಅನ್ನದ ಸಾರವನ್ನು ನಾನು ಸೇವಿಸುತ್ತಿದ್ದೇನೆ. ಎಂದು ಪ್ರಾಶನೆ ಮಾಡಿ ಅಚಮನ ಮಾಡುತ್ತಾನೆ.

ಮಯಿ ದೋಹಃ ಪದ್ಯಾಯೈವಿರಾಜಃ, ನಾನು ಸೇವಿಸಿದ ಯಾವ ಅನ್ನದಸಾರ ವುಂಟೋ ಅದು ನನ್ನ ಸ್ಥಾನದಲ್ಲಿ ನಿಲ್ಲುವ ನನ್ನ ಪುತ್ರಾದಿಗಳಿಗುಂಟಾಗಲಿ ಎಂದು ಪ್ರಾಶನೆ ಮಾಡಿ ಅಚಮನ ಮಾಡುತ್ತಾನೆ.

ಉಳಿದ ಮಧುಪರ್ಕ ಶೇಷವನ್ನು ತಟ್ಟೆಯಲ್ಲಿರುವ ನೀರಿನಲ್ಲಿ ಬಗ್ಗಿಸಿ ಎಲೈ ಅಮೃತವೆ ನೀನು ಮುಚ್ಚಲ್ಪಟ್ಟಿದ್ದೀಯೆ ಎಂದು ಉತ್ತರಾಪೋಶನವನ್ನು ತೆಗೆದು ಕೊಳ್ಳುತ್ತಾನೆ.

ಅಮೃತೋಪಸ್ತರಣಮಸಿ; ಅಮೃತಾ ಪಿಧಾನಮಸಿ

ಪುರೋಡಾಶಾದಿಗಳಿಗೆ ಮೊದಲು ಅಭಿಘಾರನ್ನು ಮಾಡಿ ಅವದಾನ ಧರ್ಮದಿಂದ ಹವಿಸ್ಸನ್ನಿಟ್ಟು ಪುನಃ ಹೇಗೆ ಅಭಿಘಾರವನ್ನು ಮಾಡುತ್ತೇವೆಯೋ ಅದರಂತೆ ನಾವು ಹೊಟ್ಟೆಗೆ ಆಹಾರವನ್ನು ತೆಗೆದುಕೊಳ್ಳುವುದಕ್ಕೆ ಮುಂಚೆ ಪರಿಷೇಚನೆಯನ್ನು ಮಾಡಿ "ಅಮೃತೋಪಸ್ತರಣಮಸಿ" ಎಂದು ಆಪೋಶನವನ್ನು ತೆಗೆದುಕೊಂಡು ಭೋಜನವು ಮುಗಿದ ನಂತರ "ಅಮೃತಾಪಿಧಾನಮಸಿ" ಎಂದು ಉತ್ತರಾಪೋಶನವನ್ನು ತೆಗೆದುಕೊಳ್ಳುತ್ತೇವೆ.

ಒಂದು ಪದಾರ್ಥವನ್ನು ಜೋಪಾನ ಮಾಡಬೇಕಾದರೆ ಪಾತ್ರೆಯಲ್ಲಿ ವಸ್ತುವನ್ನಿಟ್ಟು ಆ ಪಾತ್ರೆಯಮೇಲೆ ಮುಚ್ಚಳವನ್ನು ಮುಚ್ಚಿದಂತೆ ಉಪಸ್ತರಣಾಪಿಧಾನಗಳು.

ಹಿಂದೆ ಕೊಟ್ಟ ಆಚಮನೀಯೋದಕವನ್ನೆಲ್ಲಾ ಕೈಗೆ ಬಗ್ಗಿಸಿಕೊಂಡು ಸಕೃದಾಚಮನಕ್ಕೆ ಮಾತ್ರ ಉಳಿಸಿಕೊಂಡು ಮಿಕ್ಕದ್ದನ್ನೆಲ್ಲಾ ಬಿಟ್ಟು "ಸತ್ಯಂಯಶಶ್ರೀರ್ಮಯಿ ಶ್ರೀಶ್ರಯತಾಂ" ಸತ್ಯ, ಯಶಸ್ಸು, ಸಂಪತ್ತು, ವೇದತ್ರಯ ರೂಪವಾದ ಈ ಸಂಪತ್ತು ಮಧುಪರ್ಕದ ಭಕ್ಷಣದಿಂದ ನನಗೆ ಲಭಿಸಲಿ" ಎಂದು ಕುಡಿದುಬಿಟ್ಟು, ಎರಡು ಸಲ ಆಚಮನವನ್ನು ಮಾಡುತ್ತಾನೆ. ಶುದ್ಧ ಗೋವಿಗೆ ಬದಲಾಗಿ ಒಂದು ತೆಂಗಿನಕಾಯಿಯನ್ನು ಕನ್ಯಾದಾತನು ಮಧುಪರ್ಕಾಂಗವಾಗಿ ತಂದು ವರನ ಮುಂದೆ ಇಡುತ್ತಾನೆ. ಅದನ್ನು ನೋಡಿ ವರನು,

ಮಾತಾ ರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾ ಮಮೃತಸ್ಯ

ನಾಭಿಃ । ಪ್ರನುವೋಚಂಚಿಕಿತುಷೇ ಜನಾಯ ಮಾಗಾಮನಾಗಾಮದಿತಿಂವಧಿಷ್ಟ॥

ಏಕಾದಶ ರುದ್ರರಿಗೆ ತಾಯಿಯು ಅಷ್ಟವಸುಗಳಿಗೆ ಮಗಳೂ ದ್ವಾದಶಾ-ದಿತ್ಯರಿಗೆ ಸಹೋದರಿಯೂ ಅಮರತ್ವ ಪ್ರಾಪ್ತಿಗೆ ಕಾರಣಳೂ ಯಜ್ಞಕ್ಕೆ ನಾಭಿಯೂ ಆದ ಈ ಧೇನುವು ಜ್ಞಾನಿಯಾದ ಮನುಷ್ಯನಿಗೆ ಬೇಗನೆ ಹೇಳು ತ್ತೇನೆ, ಪಾಪರಹಿತೆಯಾದ ಅದಿತಿಸ್ವರೂಪಳಾದ ಈ ಧೇನುವನ್ನು "ಓ ಮುತ್ಸೃಜತ" ಕೊಲ್ಲದೇ ಬಿಟ್ಟು ಬಿಡಿ ಎಂದು ಹೇಳಿ ಆ ಕಾಯಿಯನ್ನು ಉರುಳಿಸಿ ಬಿಡುತ್ತಾನೆ,

ಅತ್ರೈವದ್ವಿತೀಯ ಯಜ್ಞೋಪವೀತ ಧಾರಣ ಮಿತಿ ಕೇಚಿತ್ ॥
ಈ ಮಧುಪರ್ಕಾಂಗ ಯಜ್ಞೋಪವೀತ ಧಾರಣೆಯಾಗ ಬೇಕೆಂದು ಕೆಲವು ಋಷಿಗಳ ಮತ.

**ನಿರೀಕ್ಷಣೆ :** ಅಥ ಕನ್ಯಾದಾನಾನಂತರಂ ನಿರೀಕ್ಷಣಂ ಕರ್ತವ್ಯಮಿತ್ಯುಕ್ತಂ ಗೃಹ್ಯಪರಿಶಿಷ್ಟೇ ಶೌನಕೇನ ನಿರೀಕ್ಷಣಾನಂತರಂ ದಾನ ಮಿತ್ಯುಕ್ತತ್ವಾತ್ ಪ್ರಚುರಾಚಾರಸ್ಯಾಪಿ ತಥಾ ದೃಷ್ಟತ್ವಾನ್ನಿರೀಕ್ಷಣ ಮೇವಾಗ್ರೇ ವಕ್ಷ್ಯತೇ ॥

ಗೃಹ್ಯ ಪರಿಶಿಷ್ಟದಲ್ಲಿ ಕನ್ಯಾದಾನವಾದ ಮೇಲೆ ನಿರೀಕ್ಷಣೆಯನ್ನು ಮಾಡ ಬೇಕೆಂದು ಹೇಳಿರುತ್ತೆ. ಆದರೆ ಶೌನಕರು ನಿರೀಕ್ಷಣಾನಂತರ ದಾನ ಮಾಡ ಬೇಕೆಂದು ಹೇಳಿರುವುದರಿಂದಲೂ ಪೂರ್ವಾಚಾರವೂ ಇದೇ ರೀತಿಯಾಗಿ ನಡೆದು ಬಂದಿರುವುದರಿಂದಲೂ ಮೊದಲು ನಿರೀಕ್ಷಣೆಯನ್ನು ಹೇಳುತ್ತದೆ.

ಅಥ ಪೂರ್ವಸ್ಮಿನ್ ರಾಶೌ ಪ್ರತ್ಯಙ್ಮುಖಂ ವರಂ ಪಶ್ಚಿಮ ರಾಶೌಚ ಪ್ರಾಙ್ಮುಖೀಂ ಕನ್ಯಾಂ ಅಥವಾ ಪೂರ್ವಸ್ಮಿನ್ ಕನ್ಯಾಂ ಅಪರಸ್ಮಿನ್ ವರಂ ಪ್ರತ್ಯೇಕಂ ಧೃತ ಗುಡಜೀರಕ ಪಾಣೀ ಸ್ಥಾಪಯೇಯುಃ॥

ಪೂರ್ವದ ಕಡೆಯಿರುವ ಅಕ್ಕಿಯ ರಾಶಿಯ ಮೇಲೆ ಪಶ್ಚಿಮಾಭಿಮುಖ ವಾಗಿ ವರನನ್ನೂ ಪಶ್ಚಿಮದ ಕಡೆಯಿರುವ ಅಕ್ಕಿಯ ರಾಶಿಯ ಮೇಲೆ ಪೂರ್ವಾಭಿ ಮುಖಳನ್ನಾಗಿ ವಧುವನ್ನೂ ಅಥವಾ ಇದಕ್ಕೆ ವ್ಯತ್ಯಾಸವಾಗಿ ಯಾದರೂ ನಿಲ್ಲಿಸಬೇಕು.

ಈ ವಿಚಾರದಲ್ಲಿ ಅಂದರೆ ಪೂರ್ವದ ಕಡೆ ಪಶ್ಚಿಮಾಭಿಮುಖನಾಗಿ ವರನೂ ಪಶ್ಚಿಮದ ಕಡೆ ಪೂರ್ವಾಭಿಮುಖಳಾಗಿ ವಧುವೂ ನಿಲ್ಲಬೇಕೆಂದು ಮತಾಂತರ ಗಳಿವೆ.

ಸ್ನಾತಾಲಂಕೃತ ಕನ್ಯಾಯಾಃ ಪ್ರಾಙ್ಮುಖ್ಯಾಃ ಪ್ರತ್ಯಗಾನನಃ ।
ಈ ಕ್ಷೇತ ತುಂಡುಲ ಸ್ಥಾಯಾ ವರಸ್ಯಚ ಮುಖಂಚಸಾ॥

ಸಂಗ್ರಹೇ :–ಕನ್ಯಾವರಣ ಕಾಲೇತು ಪ್ರಾಙ್ಮುಖೀಂ ವರಯೇದ್ವಧೂಂ ।
ಪಶ್ಚಿಮಾಸ್ಯಂ ವರಂ ಸ್ಥಾಪ್ಯ ದ್ರೋಣ ಮಾನೇತು ತಂಡುಲೇ॥

**ಶಾಕಲೋಪಿ** : ಪ್ರಾಙ್ಮುಖೀಂ ವೃಣು ಯಾತ್ಕನ್ಯಾಂ ಗೋತ್ರ ಸಂಬಂಧ ಪೂರ್ವಕಂ । ಪ್ರತ್ಯಙ್ಮುಖಂ ವರಂಕೃತ್ವಾ ವೃಣುಯಾದ್ವಧು ಪೂರ್ವಕಂ॥

ಶಾತಾತಪೀಯೇ ಬೋಧಾಯನಃ–

ಪ್ರಾಙ್ಮುಖಂ ತಂ ವರಂ ಕುರ್ಯಾತ್ ವರುಣಾಭಿಮುಖೀಂವಧೂಂ ।
ಕನ್ಯಾವರಣ ಕಾಲೇತು ದಾನಕಾಲೇ ವಿಪರ್ಯಯಃ ॥
ಪ್ರಾಙ್ಮುಖಃ ಪ್ರತಿಗೃಹ್ಣೀಯಾತ್ ಪ್ರಾಙ್ಮುಖಂ ವರಯೇದ್ವರಂ ।
ವೃಣುಯಾದ್ಗೋತ್ರ ನಾಮಾದ್ಯೈಃ ವರುಣಾಭಿ ಮುಖಂ ಸ್ಥಿತಾಂ॥.

ಒಟ್ಟನಲ್ಲಿ ನಿರೀಕ್ಷಣ ಕಾಲದಲ್ಲಿ ವರನು ಪಶ್ಚಿಮಾಭಿಮುಖನಾಗಿಯೂ ವಧುವು ಪೂರ್ವಾಭಿಮುಖಳಾಗಿಯೂ ನಿಲ್ಲಬೇಕೆಂದು ಬಹುಮತವಿದೆ.

ಈ ವಧುವರರು ನಿರೀಕ್ಷಣೆಗೆ ನಿಂತಾಗ ಜೀರಿಗೆ ಬೆಲ್ಲಗಳನ್ನು ಕೈಯಲ್ಲಿ ಹಿಡಿದುಕೊಂಡು ಇಷ್ಟದೇವರನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಿರಬೇಕು.

ನಿರೀಕ್ಷಣೆ ಕಾಲದಲ್ಲಿ ಬ್ರಾಹ್ಮಣರು ಸೂರ್ಯಸೂಕ್ತ ಮಂಗಳಾಷ್ಟಕ ಮತ್ತು ಚೂರ್ಣಿಕೆಗಳನ್ನು ಪಠಿಸಬೇಕು. ಸುವಾಸಿನಿಯರು ಮಂಗಳಕರವಾದ ಹಾಡುಗಳನ್ನು ಹೇಳುತ್ತಿರಬೇಕು. ವಾದ್ಯಗಳು ಮೊಳಗುತ್ತಿರಬೇಕು.

## ಸೂರ್ಯಾಸೂಕ್ತ

ಸತ್ಯೇನೋತ್ತಭಿತಾ ಭೂಮಿ ಸ್ಸೂರ್ಯೇಣೋತ್ತಭಿತಾ ದ್ಯೌಃ ।

ಋತೇನಾ ದಿತ್ಯಾ ಸ್ತಿಷ್ಠಂತಿ ದಿವಿ ಸೋಮೋ ಅಧಿ ಶ್ರಿತಃ ॥

ಸೋಮೇನಾದಿತ್ಯಾ ಬಲಿನ ಸ್ಸೋಮೇನ ಪೃಥಿವೀ ಮಹೀ ।

ಅಥೋ ನಕ್ಷತ್ರಾಣಾ ಮೇಷಾ ಮುಪಸ್ಥೇ ಸೋಮ ಆಹಿತಃ ॥

ಸೋಮಂ ಮನ್ಯತೇ ಪಪಿವಾ ಯತ್ಸಂ ಪಿಂಷಂತ್ಯೋಷಧಿಂ ।

ಸೋಮಂ ಯಂ ಬ್ರಹ್ಮಾಣೋ ವಿದುರ್ನ ತಸ್ಯಾ ಶ್ನಾತಿ ಕಶ್ಚನ ॥

ಆಚ್ಛ ದ್ವಿಧಾನೈರ್ಗುಪಿತೋ ಬಾರ್ಹತೈ ಸ್ಸೋಮ ರಕ್ಷಿತಃ ।

ಗ್ರಾವ್ಣಾ ಮಿಚ್ಛೃಣ್ವನ್ತಿಷ್ಠಸಿ ನತೇ ಅಶ್ನಾತಿ ಪಾರ್ಥಿವಃ ।

ಯ ತ್ವಾ ದೇವ ಪ್ರಪಿಬಂತಿ ತತ ಆಪ್ಯಾ ಯಸೇ ಪುನಃ ।

ಯು ಸ್ಸೋಮಸ್ಯ ರಕ್ಷಿತಾ ಸಮಾನಾಂ ಮಾಸ ಆಕೃತಿಃ ॥

ರೈಭ್ಯಾಸೀದನುದೇಯೀ ನಾರಾಶಂಸೀನ್ಯೋಚನೀ ।

ಸೂರ್ಯಾಯಾ ಭದ್ರ ಮಿದ್ವಾಸೋ ಗಾಥಯೈತಿ ಪರಿಷ್ಕೃತಂ ॥

ಚಿತ್ತಿರಾ ಉಪಬರ್ಹಣಂ ಚಕ್ಷುರಾ ಽಭ್ಯಂಜನಂ ।

ದ್ಯೌರ್ಭೂಮಿಃ ಕೋಶ ಆಸೀದ್ಯದಯಾತ್ಸೂರ್ಯಾ ಪತಿಂ ॥

ಸ್ತೋಮಾ ಆಸನ್ಪ್ರತಿಧಯಃ ಕುರೀರಂ ಛಂದ ಓಪಶಃ ।

ಸೂರ್ಯಾಯಾ ಅಶ್ವಿನಾ ವರಾಗ್ನಿರಾಸೀತ್ಪುರೋಗವಃ ॥

ಸೋಮೋ ವಧೂಯುರಭವದಶ್ವಿನಾಸ್ತಾಮುಭಾ ವರಾ ॥

ಸೂರ್ಯಾಂ ಯತ್ಪತ್ಯೇ ಶಂಸಂತೀಂ ಮನಸಾ ಸವಿತಾಽದದಾತ್ ॥

ಮನೋ ಅಸ್ಯಾ ಅನ ಆಸೀ ದ್ಯೌರಾಸೀದುತಚ್ಛದಿಃ ।

ಶುಕ್ರಾವನಡ್ವಾಹಾವಾಸ್ತಾಂ ಯದಯಾತ್ಸೂರ್ಯಾ ಗೃಹಂ ॥೨॥

ಋಕ್ಸಾಮಾಭ್ಯಾ ಮಭಿಹಿತೌ ಗಾವೌ ತೇ ಸಾಮ ನಾವಿತಃ ।

ಶ್ರೋತ್ರಂ ತೇ ಚಕ್ರೇ ಆಸ್ತಾಂ ದಿವಿ ಪಂಥಾಶ್ಚರಾ ಚರಃ ॥

ಶುಚೀ ತೇ ಚಕ್ರೇ ಯಾತ್ಯಾ ವ್ಯಾನೋ ಅಕ್ಷ ಆಹತಃ ।

ಅನೋ ಮನ ಸ್ಮಯಂ ಸೂರ್ಯಾರೋಹತ್ಪ್ರಯತೀ ಪತಿಂ ॥

ಸೂರ್ಯಾಯಾ ವಹತುಃ ಪ್ರಾಗಾತ್ಸವಿತಾಯಮ ವಾಸೃಜತ್ ।

ಅಘಾಸು ಹನ್ಯಂತೇ ಗಾವೋಽರ್ಜುನ್ಯೋಃ ಪರ್ಯುಹ್ಯತೇ ॥

ಯದಶ್ವಿನಾ ಪೃಚ್ಛ ಮಾನಾ ವಯಾತಂ ತ್ರಿಚಕ್ರೇಣ ವಹತುಂ ಸೂರ್ಯಾಯಾಃ ।

ವಿಶ್ವೇದೇವಾ ಅನು ತದ್ವಾಮಜಾನನ್ಪುತ್ರಃ ಪಿತರಾ ವವೃಣೀತ ಪೂಷಾ ॥

ಯದಯಾತಂ ಶುಭಸ್ಪತೀ ವರೇಯಂ ಸೂರ್ಯಾಮುಪ ।

ಕ್ವೈಕಂ ಚಕ್ರಂ ವಾ ಮಾಸೀತ್ಕ್ವ ದೇಷ್ಟ್ರಾಯ ತಸ್ಥಥುಃ ॥೩॥

ದ್ವೇತೇ ಚಕ್ರೇ ಸೂರ್ಯೇ ಬ್ರಹ್ಮಾಣ ಋತುಥಾ ವಿದುಃ ।

ಅಥೈಕಂ ಚಕ್ರಂ ಯದ್ಗುಹಾ ತದ ದ್ಧಾತಯ ಇದ್ವಿದುಃ ॥

ಸೂರ್ಯಾಯೈ ದೇವೇಭ್ಯೋ ಮಿತ್ರಾಯ ವರುಣಾಯ ಚ ।

ಯೇಭೂತಸ್ಯ ಪ್ರಚೇತಸ ಇದಂ ತೇಭ್ಯೋಽಕರಂ ನಮಃ ॥

ಪೂರ್ವಾಪರಂ ಚರತೋ ಮಾಯಯೈತೌ

ಶಿಶೂಕ್ರೀಳಂತೌ ಪರಿಯಾತೋ ಅಧ್ವರಂ ।

ವಿಶ್ವಾನ್ಯನ್ಯೋ ಭುವ ನಾಭಿ ಚಷ್ಟ

ಋತೂಜ್ ರನ್ಯೋ ವಿದಧಜ್ಜಾಯತೇ ಪುನಃ ॥

ನವೋನವೋಭವತಿಜಾಯ ಮಾನೋಽನ್ಹಾಂ ಕೇತುರುಷಸಾ ಮೇತ್ಯಗ್ರಂ ।

ಭಾಗಂ ದೇವೇಭ್ಯೋ ವಿದಧಾತ್ಯಾಯರ್ಪ್ರಚಂದ್ರಮಾಸ್ತಿರತೇ ದೀರ್ಘ

ಮಾಯುಃ ॥

ಸುಕಿಂ ಶುಕಂ ಶಲ್ಮಲಿಂ ವಿಶ್ವರೂಪಂ

ಹಿರಣ್ಯವರ್ಣಂ ಸುವೃತಂ ಸು ಚಕ್ರಂ ।

ಆರೋಹ ಸೂರ್ಯೇ ಅಮೃತಸ್ಯ ಲೋಕಂ

ಸ್ಯೋನಂ ಪತ್ಯೇ ವಹತುಂ ಕೃಣುಷ್ವ ॥೪॥

ಉದೀರ್ಷ್ವಾತಃ ಪತಿವತೀಹ್ಯೇ ಏ3 ಷಾ

ವಿಶ್ವಾವಸುಂ ನ ಮಸಾಗೀರ್ಭಿರೀಳೇ ।

ಅನ್ಯಾಮಿಚ್ಛ ಪಿತೃಷದಂ ವ್ಯಕ್ತಾಂ

ಸತೇ ಭಾಗೋ ಜನುಷಾ ತಸ್ಯ ವಿದ್ಧಿ ॥

ಉದೀರ್ಷ್ವಾತೋ ವಿಶ್ವಾವಸೋ ನಮಸೇಳಾ ಮಹೇತ್ವಾ ।

ಅನ್ಯಾಮಿಚ್ಛ ಪ್ರಫರ್ವ್ಯಂ ಸಂ ಜಾಯಾಂಪತ್ಯಾಸೃಜ ॥

ಅನೃಕ್ಷರಾ ಋಜವಸ್ಸಂತು ಪಂಥಾ ಯೇಭಿಸ್ಸಖಾಯೋಽಯಂತಿನೋವರೇಯಂ।

ಸಮರ್ಯಮಾ ಸಂಭಗೋ ನೋ ನಿನೀಯಾತ್ಸಂಜಾಸ್ಪತ್ಯಂ ಸುಯಮ ಮಸ್ತು

ದೇವಾಃ

ಪ್ರತ್ವಾ ಮುಂಚಾಮಿ ವರುಣಸ್ಯ ಪಾಶಾ

ದ್ಯೇನತ್ವಾ ಬಧ್ನಾತ್ಸವಿತಾ ಸುಶೇವಃ ।

ಋತಸ್ಯ ಯೋ ನೌ ಸುಕೃತಸ್ಯ ಲೋಕೇऽ

ರಿಷ್ಟಾಂ ತ್ವಾ ಸಹ ಪತ್ಯಾ ದಧಾಮಿ ॥

ಪ್ರೇತೋ ಮುಂಚಾಮಿ ನಾಮುತ

ಸ್ಸುಬಧ್ನಾಮ ಮುತಸ್ಕರಂ ।

ಯಥೇಯ ಮಿಂದ್ರ ಮೀಢ.

ಸ್ಸುಪುತ್ರಾ ಸುಭಗಾಸತಿ ॥೫॥

ಪೂಷಾ ತ್ವೇತೋ ನಯತು ಹಸ್ತಗೃಹ್ಯಾ

ಶ್ವಿನಾ ತ್ವಾ ಪ್ರವಹತಾಂ ರಥೇನ ।

ಗೃಹಾನ್ ಗಚ್ಛ ಗೃಹ ಪತ್ನೀಯಥಾಸೋ

ವಶಿನೀ ತ್ವಂ ವಿದಥ ಮಾವ ದಾಸಿ ॥

ಇಹ ಪ್ರಿಯಂ ಪ್ರಜಾಯಾತೇ ಸಮೃಧ್ಯತಾ

ಮಸ್ಮಿನ್ಗೃಹೇ ಗಾರ್ಹಪತ್ಯಾಯ ಜಾಗೃಹಿ ।

ಏನಾ ಪತ್ಯಾ ತನ್ವಂ ಸಂಸೃಜಸ್ವಾಧಾ ಜೀವ್ರೀವಿದಥ ಮಾವದಾಥಃ

ನೀಲ ಲೋಹಿತಂ ಭವತಿ ಕೃತ್ಯಾ ಸಕ್ತಿರ್ವ್ಯಜ್ಯತೇ ।

ಏಧಂತೇ ಅಸ್ಯಾ ಜ್ಞಾತಯಃ ಪತಿ ರ್ಬಂಧೇಷು ಬಧ್ಯತೇ ॥

ಪರಾ ದೇಹಿ ಶಾಮುಲ್ಯಂ ಬ್ರಹ್ಮಭ್ಯೋ ವಿಭಜಾವಸು ।

ಕೃತ್ಯೈೃಷಾ ಪದ್ವತೀ ಭೂತ್ವಾ ಜಾಯಾ ವಿಶತೇ ಪತಿಂ ॥

ಆಶ್ರೀರಾ ತನೂರ್ಭವತಿ ರುಶತೀ ಪಾಪಯಾಽಮುಯಾ ।

ಪತಿರ್ಯದ್ವಧ್ವೋ೩ ವಾಸಸ್ವಾ ಸಮಂಗ ಮಭಿಧಿತ್ಸತೇ ॥೬॥

ಯೇ ವಧ್ವಶ್ಚಂದ್ರಂ ವಹತುಂ ಯಕ್ಷ್ಮಾ ಯಂತಿ ಜನಾಽನು ।

ಪುನಸ್ತಾ ಯಜ್ಞಿಯಾ ದೇವಾ ನಯಂತು ಯತ ಆಗತಾಃ ॥

ಮಾವಿದ ಪರಿ ಪಂಥಿನೋ ಯ ಆಸೀದಂತಿ ದಂಪತೀ ।

ಸುಗೇಭಿ ದುರ್ಗಮತೀತಾ ಮಪದ್ರಾಂತ್ವರಾತಯಃ ॥

ಸುಮಂಗಲೀರಿಯಂ ವಧೂರಿಮಾಂ ಸಮೇತ ಪಶ್ಯತ ।

ಸೌಭಾಗ್ಯ ಮಸ್ಯೈ ದತ್ವಾಯಾಥಾಸ್ತಂ ವಿಪರೇತನ ॥

ತೃಷ್ಟ ಮೇತ ತ್ಕಟುಕ ಮೇತ ದ ಪಾಷ್ಠ ವದ್ವಿಷವನ್ನೈತ ದತ್ತವೇ ।

ಸೂರ್ಯಾಂ ಯೋ ಬ್ರಹ್ಮಾ ವಿದ್ಯಾತ್ಸ ಇದ್ವಾ ಧೂಯ ಮರ್ಹತಿ ||

ಆಶಸನಂ ವಿಶಸನಮಥೋ ಅಧಿ ವಿಕರ್ತನಂ |

ಸೂರ್ಯಾಯಾಃ ಪಶ್ಯ ರೂಪಾಣಿ ತಾನಿ ಬ್ರಹ್ಮಾತು ಶುಂಧತಿ ||೭||

ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಂ

ಮಯಾ ಪತ್ಯಾ ಜರ ದಷ್ಟಿ ರ್ಯ ಥಾಽಸಃ |

ಭಗೋ ಅರ್ಯಮಾ ಸವಿತಾ ಪುರಂಧಿ

ರ್ಮಹ್ಯಂ ತ್ವಾದುರ್ಗಾರ್ಹಪತ್ಯಾಯ ದೇವಾಃ ||

ತಾಂ ಪೂಷಞ್ ಛಿವತಮಾ ಮೇರಯಸ್ವ

ಯಸ್ಯಾಂ ಬೀಜಂ ಮನುಷ್ಯಾಽ3 ವಪಂತಿ ||

ಯಾ ನ ಊರೂ ಉಶತೀ ವಿಶ್ರಯಾತೇ

ಯಸ್ಯಾ ಮುಶಂತಃ ಪ್ರಹರಾಮ ಶೇಪಂ ॥

ತುಭ್ಯ ಮಗ್ರೇ ಪರ್ಯವಹನ್ ತ್ಸೂರ್ಯಾಂ ವಹತು ನಾ ಸಹ ।

ಪುನಃ ಪತಿಭ್ಯೋ ಜಾಯಾಂ ದಾ ಅಗ್ನೇ ಪ್ರಜಯಾ ಸಹ ॥

ಪುನಃ ಪತ್ನೀ ಮಗ್ನಿರದಾದಾಯುಷಾ ಸಹ ವರ್ಚಸಾ ।

ದೀರ್ಘಾಯುರಸ್ಯಾ ಯುಃ ಪತಿರ್ಜೀವಾತಿ ಶರದಶ್ಶತಂ ॥

ಸೋಮಃ ಪ್ರಥಮೋವಿವಿದೇ ಗಂಧರ್ವೋ ವಿವಿದ ಉತ್ತರಃ ।

ತೃತೀಯೋ ಅಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯಜಾಃ ॥೮॥

ಸೋಮೋಽದದದ್ಗಂಧರ್ವಾಯ ಗಂಧರ್ವೋಽದದದಗ್ನಯೇ ।

ರಯಿಂ ಚ ಪುತ್ರಾಂಶ್ಚಾ ದಾದಗ್ನಿರ್ಮಹ್ಯ ಮಥೋ ಇಮಾಂ ॥

ಇಹೈವ ಸ್ತಂ ಮಾ ವಿ ಯೌಷ್ಟಂ ವಿಶ್ವಮಾಯು ರ್ವ್ಯಶ್ನುತಂ ।

ಕ್ರೀಳಂತೌ ಪುತ್ರೈರ್ನಪ್ತೃಭಿರ್ಮೋದ ಮಾನೌ ಸ್ವೇಗೃಹೇ ।

ಆನಃ ಪ್ರಜಾಂ ಜನಯತು ಪ್ರಜಾಪತಿ ರಾಜರಸಾಯ ಸಮನಕ್ತ್ವರ್ಯಮಾ ।

ಅದುರ್ಮಂಗಲೀಃ ಪತಿಲೋಕ ಮಾವಿಶ ಶಂನೋ ಭವ ದ್ವಿಪದೇ ಶಂಚತು
ಷ್ಪದೇ ।

ಅಘೋರ ಚಕ್ಷುರಪತಿ ಘ್ನ್ಯೇಧಿ ಶಿವಾ ಪಶುಭ್ಯ ಸ್ಸುಮನಾ ಸ್ಸುವರ್ಚಾಃ ।

ವೀರ ಸೂ ರ್ದೇವ ಕಾಮಾ ಸ್ಯೋನಾ ಶಂನೋ ಭವ ದ್ವಿಪದೇ ಶಂ ಚತು
ಷ್ಪದೇ

ಇಮಾಂ ತ್ವ ಮಿಂದ್ರ ಮೀಢ್ವ ಸ್ಸುಪುತ್ರಾಂ ಸುಭಗಾಂ ಕೃಣು ।

ದಶಾಸ್ಯಾಂ ಪುತ್ರಾ ನಾಧೇಹಿ ಪತಿ ಮೇಕಾದಶಂ ಕೃಧಿ ।

ಸಂರಾಜ್ಞೀ ಶ್ವಶುರೇ ಭವ ಸಂ ರಾಜ್ಞೀ ಶ್ವಶ್ರ್ವಾಂ ಭವ ।

ನನಾಂದರಿ ಸಂರಾಜ್ಞೀ ಭವ ಸಂರಾಜ್ಞೀ ಅಧಿ ದೇವೃಷು ॥

॥ ॥ ।
ಸಮಂಜತು ವಿಶ್ವೇ ದೇವಾ ಸ್ಸಮಾಪೋ ಹೃದಯಾನಿ ನೌ ।

॥ ।
ಸಂ ಮಾತರಿಶ್ವಾ ಸಂಧಾತಾ ಸಮುದೇಷ್ಟ್ರೀ ದಧಾತು ನೌ ॥

ವಿವಾಹ ಲಗ್ನ ಅಥವಾ ಮುಹೂರ್ತವೆಂದರೆ ಜ್ಯೋತಿಷ್ಕರು ನಿಷ್ಕರ್ಷೆ ಮಾಡಿರುವ ಕಾಲದಲ್ಲಿ ವಧೂವರರು ಪರಸ್ಪರ ಜೀರಿಗೆ ಬೆಲ್ಲಗಳನ್ನು ಹಾಕಿ ಮುಖವನ್ನು ನೋಡಿ ಕೊಳ್ಳುವುದೇ ಮುಖ್ಯವಾದ ಕರ್ಮವಾಗಿದೆ. ನಿರೀಕ್ಷಣೇ ಕಾಲದಲ್ಲಿ ಅವರಿಬ್ಬರ ಮಧ್ಯೇ ಶ್ರೀಕಾರ ಅಥವಾ ಸ್ವಸ್ತಿಕ ಚಹ್ನೆಯುಳ್ಳ ವಸ್ತ್ರವನ್ನು ಹಿಡಿದಿರಬೇಕು. ಪುರೋಹಿತರು ಸೂರ್ಯಾಸೂಕ್ತವನ್ನೂ ಮಂಗಳಾಷ್ಟಕ ಮತ್ತು ಚೂರ್ಣಿಕೆಯನ್ನೂ ಪಠಿಸಬೇಕು.

ಸೂರ್ಯಾಸೂಕ್ತ, ಮಂಗಳಾಷ್ಟಕ ಮತ್ತು ಚೂರ್ಣಿಕೆಗಳು ಮುಗಿದ ಕೂಡಲೇ ಜೋಯಿಸರು ಗೊತ್ತು ಪಡಿಸಿರುವ ಸಮಯಕ್ಕೆ ಸರಿಯಾಗಿ ಪರದೆಯನ್ನು ತೆಗೆದ ಕೂಡಲೇ ಕನ್ಯಾವರರು ಪರಸ್ಪರ ಜೀರಿಗೆ ಬೆಲ್ಲಗಳನ್ನು ಹಾಕಿ ಒಬ್ಬರನ್ನೊಬ್ಬರು ನೋಡುವರು.

ವರನು ಕನ್ಯೆಯನ್ನು ನಿರೀಕ್ಷಿಸುವ ಮಂತ್ರ

ಅಭ್ರಾತೃಘ್ನಿಂ ವರುಣಾಪತಿಘ್ನೀಂ ಬೃಹಸ್ಪತೇ ।
ಇಂದ್ರಾಪುತ್ರಘ್ನೀಂ ಲಕ್ಷ್ಮ್ಯಂತಾಮಸ್ಯೈ ಸವಿತುಸ್ಸವ ॥

ನೀನು ಯಾರಲ್ಲಿಯೂ ದ್ರೋಹವನ್ನೆಣಿಸಬೇಡ. ಯಾರನ್ನೂ ದೂಷಿಸಬೇಡ. ಎಲ್ಲರನ್ನೂ ಸಮನಾಗಿ ನೋಡು ಸಹೋದರರನ್ನು ಕೊಲ್ಲಬೇಡ ಎಲೈ ವರುಣನೇ ಪತಿಯನ್ನು ಕೊಲ್ಲಬೇಡ ಎಲೈ ಬೃಹಸ್ಪತಿಯೇ, ಎಲೈ ಇಂದ್ರನೇ, ಪುತ್ರಹೀನನಾಗುವಂತೆ ಮಾಡಬೇಡ, ಇವಳಿಗೆ ಸೂರ್ಯನ ಅನುಗ್ರಹದಿಂದ ಲಕ್ಷ್ಮಿಯು ಪ್ರಾಪ್ತಿಯಾಗಲಿ.

**ಕನ್ಯೆಯು ವರನನ್ನು ನಿರೀಕ್ಷಿಸುವ ಮಂತ್ರದ ಅರ್ಥ**

ಎಲೈ ವಧುವೇ ನೀನು ಭಯಂಕರವಾದ ನೋಟ ಇಲ್ಲದೇ ಪತಿಯನ್ನು ಸಮೀಪಿಸು. ಕೇಡನ್ನು ಬಯಸಬೇಡ. ಪಶುಗಳಿಗೆ ಹಿತಕರಳೂ ಒಳ್ಳೆಯ ವರ್ಚಸ್ವಿನಿಯೂ ಆಗು. ವೀರ ಪುತ್ರರನ್ನು ಪಡೆದು ದೇವ ಪೂಜಾಸಕ್ತಳೂ ಸುಖಕರಳೂ ಆಗಿರು.

ಆ ಮೇಲೆ ವರನು ಪೂರ್ವ ಮುಖನಾಗಿ ನಿಂತು ವಧುವು ಪಶ್ಚಿಮ ಮುಖಳಾಗಿ ನಿಲ್ಲುತ್ತಾಳೆ. ವರನು ದರ್ಭೆಯಿಂದ ಅವಳ ನೆತ್ತಿಯ ಮೇಲೆ ಮುಟ್ಟಿ ದರ್ಭೆಯನ್ನು ಕೆಳಗೆ ಹಾಕುತ್ತಾನೆ.

**ಜಲಶುದ್ಧಿ :**

ಕನ್ಯಾದಾನಕ್ಕೋಸ್ಕರ ಉಪಯೋಗಿಸುವ ಜಲವನ್ನು ಶುದ್ಧಿಪಡಿಸುವುದ ಕ್ಕೋಸ್ಕರ ವಧೂವರರ ಮಧ್ಯೇ ಪೂರ್ವೋತ್ತರಗಳಾಗಿ ದರ್ಭೆಯನ್ನು ಹಾಸಿ ಆದರ ಮೇಲೆ ಜಲಕುಂಭವನ್ನಿಟ್ಟು ಪುರೋಹಿತನು ಅಬ್ದೇವತಾಕವಾದ ಮಂತ್ರ ಗಳನ್ನು ಪಠಿಸಬೇಕು. ಅಬ್ದೇವತಾ ಮಂತ್ರಗಳು.

ಆಪೋಹಿಷ್ಠಾ..........ಆಪೋಜನಯಥಾಚನಃ

ಆಪೋಯಂ...........ಸ್ವಸ್ತಿಭಿಃ ಸದಾನಃ

**ನಿರೀಕ್ಷಣ ಕಾಲದಲ್ಲಿ ಪಠಿಸುವ ಸೂರ್ಯಾಸೂಕ್ತದ ಮಂತ್ರಾರ್ಥ**

ಪೃಥ್ವಿಯು ಬ್ರಹ್ಮರೂಪವಾದ ಸತ್ಯದಿಂದ ಎತ್ತಿ ಹಿಡಿಯಲ್ಪಟ್ಟಿದೆ. ದ್ಯುಲೋಕವು ಸೂರ್ಯನಿಂದ ಧರಿಸಲ್ಪಟ್ಟಿದೆ. ಅದಿತಿ ಪುತ್ರರಾದ ದೇವತೆಗಳು ಯಜ್ಞವನ್ನಾ ಶ್ರಯಿಸಿ ಜೀವಿಸುತ್ತಾರೆ. ದ್ಯುಲೋಕದಲ್ಲಿ ಸೋಮನು ಆಶ್ರಯವನ್ನು ಹೊಂದಿ ದ್ದಾನೆ. ||೧||

ಸೋಮನ ಪ್ರಭಾವದಿಂದ ದೇವತೆಗಳು ಶಕ್ತಿಯುತರಾಗಿದ್ದಾರೆ. ಪೃಥ್ವಿಯು ಮಹತ್ವವುಳ್ಳದ್ದಾಗಿದೆ. ರಸಾತ್ಮಕವಾದ ಸೋಮವು ಈ ನಕ್ಷತ್ರಗಳ ಹತ್ತಿರದಲ್ಲಿ ಸ್ಥಾಪಿತವಾಗಿದೆ. ||೨||

ಲತಾ ರೂಪವಾದ ಸೋಮನನ್ನು ರಾಸಾಯನಿಕರು ಹಿಂಡುವರೋ ಆ ಲೌಕಿಕವಾದ ರಸವನ್ನೇ ನಿಜವಾದ ಸೋಮವೆಂದು ರಸಪಾನಮಾಡುವ ಸಾಧಾರಣ ಪುರುಷನು ಅರಿಯುತ್ತಾನೆ. ಆದರೆ ಋತ್ವಿಗ್ಯಜಮಾನರು ಯಾಗ-ಯೋಗ್ಯವಾದ ಯಾವ ಸೋಮವನ್ನರಿಯುವರೋ ಅದರ ಸ್ವರೂಪವನ್ನು ಕರ್ಮರಹಿತರು ಅರಿಯಲಾರರು. ||೩||

ಎಲೈ ಸೋಮದೇವನೇ; ಹೊದ್ದಿಕೆಯ ಸಾಧನಗಳಿಂದ ಮುಚ್ಚಲ್ಪಟ್ಟವನೂ ಏಳು ಜನ ಸೋಮಪಾಲಕರಿಂದ ರಕ್ಷಿಸಲ್ಪಟ್ಟವನೂ ಆದ ನೀನು ಹಿಂಡುವ ಕಲ್ಲುಗಳ ಶಬ್ದವನ್ನು ಕೇಳುತ್ತ ನಿಂತಿದ್ದಿಯೇ ಪೃಥ್ವಿಗೆ ಸೇರಿದ ಮಾನವರು ನಿನ್ನ ಪಾನದಲ್ಲಿ ಭಾಗವನ್ನು ವಹಿಸಲಾರರು, ||೪||

ಎಲೈ ಸೋಮದೇವನೇ; ಯಾವಾಗ ದೇವತೆಗಳು ನಿನ್ನನ್ನು ಪಾನಮಾಡುವರೋ ಆ ಕ್ಷಣವೇ ಪುನಃ ನೀನು ಚೈತನ್ಯವನ್ನು ಹೊಂದುವೆ. ವಾಯುವು ಸೋಮನ ದೀಕ್ಷಕನಾಗಿದ್ದಾನೆ. ಸೋಮನು ಸಂವತ್ಸರಗಳಿಗೆ ಕಾಲ ವ್ಯವಸ್ಥೆಯನ್ನುಂಟುಮಾಡುವವನಾಗಿದ್ದಾನೆ. ||೫||

ನನ್ನ ವಿವಾಹಕಾಲದಲ್ಲಿ ರೈಭಿಯೆಂಬ ಸ್ತುತಿಗಳೇ ನನಗೆ ಜೊತೆಗಾರಳಾಗಿದ್ದಳು ನಾರಾಶಂಸಿಯೆಂಬ ಮಂತ್ರವೇ ನನ್ನ ಸೇವಕಳಾಗಿದ್ದಳು. ಸೂರ್ಯಾಸಂಜ್ಞಕಳಾದ ನನ್ನ ಮಂಗಳಕರವಾದ ವಸ್ತ್ರವು ಸಾಮಗಾನದಿಂದ ಸಂಸ್ಕೃತವಾಗುತ್ತದೆ. ||೬||

ಸೂರ್ಯೆಯು ತನ್ನ ಪತಿಯಲ್ಲಿಗೆ ಹೊಸದಾಗಿ ಹೋದಾಗ ಚಿತ್ತಸಂಜ್ಞಕವಾದ (ಮನಸ್ಸು) ತಲೆ ದಿಂಬಾಗಿ ಆಯಿತು. ಕಣ್ಣು ಅಂಜನವಾಗಿ ಆಯಿತು. ದ್ಯಾವಾಪೃಥಿವಿಗಳು ಪೆಟ್ಟಿಗೆಯಾದುವು. ||೭||

ಸೂರ್ಯೆಯ ವಿವಾಹ ಕಾಲದ ಮೆರವಣಿಗೆಯಲ್ಲಿ ಅಗ್ನಿಯು ಎಲ್ಲರಿಗೂ ಮುಂದೆ ಹೋಗುತ್ತಿದ್ದನು. ತ್ರಿವೃದಾದಿಸ್ತೋಮಗಳು ಸೂರ್ಯೆಯ ರಥದ ಸಲಾಕಿಗಳಾಗಿದ್ದವು. ಕುರೀರ ಸಂಜ್ಞಕವಾದ ಛಂದಸ್ಸು ಬಾರುಕೋಲಾಗಿದ್ದಿತು. ಅಶ್ವಿನೀ ದೇವತೆಗಳೇ ವರರಾಗಿದ್ದರು. ||೮||

ಸೋಮನು ವಧುವನ್ನು ಹೊಂದಬೇಕೆಂಬ ಇಷ್ಟವುಳ್ಳವನಾಗಿದ್ದನು. ಪತಿಯನ್ನು ಹೊಂದಬೇಕೆಂದು ಅಪೇಕ್ಷಿಸಿದ ಸೂರ್ಯೆಯನ್ನು ಸವಿತೃವು ಮನೋಯುಕ್ತನಾದ ಸೋಮನಿಗೆ ಕೊಟ್ಟಾಗ ಅಶ್ವಿನಿ ದೇವತೆಗಳಿಬ್ಬರೂ ವರರಾಗಿದ್ದರು. ||೯||

ಸೂರ್ಯೆಯು ಪತಿಯ ಗೃಹಕ್ಕೆ ಹೋದಾಗ ಅವಳ ಮನಸ್ಸೇ ರಥವಾಗಿದ್ದಿತು. ದ್ಯುಲೋಕವು ಮೇಲ್ಭಾಗದ ಹೊದ್ದಿಕೆಯಾಗಿದ್ದಿತು. ಪ್ರಕಾಶಮಾನವಾದ ಸೂರ್ಯಚಂದ್ರರು ರಥವನ್ನು ಎಳೆಯುವ ಎತ್ತುಗಳಾಗಿದ್ದರು ||೧೦||

ಎಲೈ ಸೂರ್ಯಾದೇವಿಯೇ ನೊಗಗಳಂತಿರುವ ಋಕ್ಸಾಮಗಳಿಂದ ರಥಕ್ಕೆ ಕಟ್ಟಲ್ಪಟ್ಟು ಪ್ರಚೋದಿತಗಳಾದ ಸೂರ್ಯ–ಚಂದ್ರರೆಂಬ ಎತ್ತುಗಳು ಒಂದೇ ಸಮನಾಗಿ ಹೋಗುತ್ತಿವೆ. ನಿನ್ನ ಕಿವಿಗಳು ರಥಚಕ್ರಗಳಾಗಿವೆ, ಸಂಚಾರ ಸಾಧನವಾದ ಮಾರ್ಗವು ದ್ಯುಲೋಕದಲ್ಲಿರುತ್ತದೆ. ||೧೧||

ಎಲೈ ಸೂರ್ಯಾದೇವಿಯೇ ಪತಿಗೃಹಕ್ಕೆ ಹೋಗುತ್ತಿದ್ದಾಗ ನಿನ್ನ ಶ್ರೋತ್ರಗಳು ರಥಚಕ್ರಗಳಾಗಿದ್ದವು. ವಾಯುವು ಭದ್ರವಾದ ಇರಚ ಪಟ್ಟಿಯಾಗಿ ಭಾರವನ್ನು ವಹಿಸಿದನು ಸೂರ್ಯೆಯು ಪತಿಯಾದ ಸೋಮನಲ್ಲಿಗೆ ಹೋಗುತ್ತಿರುವಾಗ ಮನೋಮಯವಾದ ಶಕಟವನ್ನು ಹತ್ತಿದಳು ||೧೨||

ಪತಿಗೃಹಕ್ಕೆ ಹೋಗುವ ಸೂರ್ಯೆಗಾಗಿ ಯಾವ ಗವಾದಿ ಸಂಪತ್ತುಗಳ ಬಳುವಳಿಗಳನ್ನು ಸೂರ್ಯನು ಮೊದಲು ಕಳುಹಿಸಿದನೋ ಅವುಗಳ ಮೆರವಣಿಗೆಯು ಸೂರ್ಯಾದೇವಿಗಿಂತಲೂ ಮೊದಲೇ ಬಂದಿತು ಸೂರ್ಯನಿಂದ ಕಳುಹಿಸಲ್ಪಟ್ಟ ಗೋವುಗಳು ಮಘಾ ನಕ್ಷತ್ರಗಳ ಗುಂಪುಗಳಲ್ಲಿ ಮುಂದೆ ಹೋಗಲು ಪ್ರೇರಿಸಲ್ಪಡುತ್ತವೆ. ಸೂರ್ಯೆಯು ಫಲ್ಗುಣ ನಕ್ಷತ್ರಗಳ ಗುಂಪುಗಳ ಮೂಲಕ ಪತಿ ಗೃಹಕ್ಕೆ ಒಯ್ಯಲ್ಪಡುತ್ತಾಳೆ ||೧೩||

ಎಲೈ ಅಶ್ವಿನೀ ದೇವತೆಗಳೇ, ಯಾವಾಗ ಸೂರ್ಯೆಯ ವಿವಾಹ ಪ್ರಶ್ನೆ ಯನ್ನು ಕೇಳುವ ನಿಮಿತ್ತವಾಗಿ ಮೂರು ಚಕ್ರಗಳ ರಥದಲ್ಲಿ ನೀವು ಹೊರ ಟಿರೋ ಆಗ ನಿಮ್ಮ ಇಚ್ಛೆಯನ್ನು ಸಕಲದೇವತೆಗಳೂ ಒಪ್ಪಿದರು. ನಿಮ್ಮ ಮಗನಾದ ಪೂಷದೇವನು ನಿಮ್ಮನ್ನು ಪಿತೃಗಳನ್ನಾಗಿ ಆರಿಸಿದನು ||೧೪||

ಉದಕಕ್ಕೆ ಪಾಲಕರಾದ ಎಲೈ ಅಶ್ವಿನೀ ದೇವತೆಗಳೇ ಯಾವಾಗ ನೀವು ಸೂರ್ಯೆಯನ್ನು ಪಡೆಯಲು ಅವಳನ್ನು ದಾನಮಾಡುವ ಸವಿತೃವಿನಲ್ಲಿಗೆ ಹೋದಿರೋ ಆಗ ನಿಮ್ಮ ರಥದ ಈಗ ಗೋಚರವಾಗುವ ಚಕ್ರವು ಎಲ್ಲಿದ್ದಿತು ದಾನಾರ್ಥವಾಗಿ ಪ್ರವೃತ್ತರಾದ ನೀವು ಎಲ್ಲಿ ನಿಂತಿದ್ದಿರಿ ||೧೫||

ಎಲೈ ಸೂರ್ಯಾದೇವಿಯೇ ನಿನ್ನ ರಥದ ಎರಡು ಚಕ್ರಗಳನ್ನೂ ಆಯಾ ನಿರ್ದಿಷ್ಟವಾದ ಋತುಕಾಲಗಳಲ್ಲಿ ಮಂತ್ರವಿತ್ತುಗಳು ಅರಿತಿದ್ದಾರೆ. ಅಲ್ಲದೆ ಏಕಾಂತದಲ್ಲಡಗಿರುವ ನಿನ್ನ ಒಂದು ಚಕ್ರದ ರಹಸ್ಯವನ್ನು ಮೇಧಾವಿ ಗಳು ಮಾತ್ರ ಅರಿಯುತ್ತಾರೆ. ||೧೬||

ಸೂರ್ಯಾದೇವಿಗೂ ಮಿತ್ರ ವರುಣ ಮತ್ತು ಇತರ ದೇವತೆಗಳಿಗೂ ಲೋಕದ ಭೂತಗಳ ವಿಷಯದಲ್ಲಿ ಅನುಗ್ರಹ ಬುದ್ಧಿಯುಳ್ಳ ಇತರ ದೇವತೆ ಗಳಿಗೂ ಈ ನಮಸ್ಕಾರವನ್ನರ್ಪಿಸುತ್ತೇನೆ ||೧೭||

ಶಿಶು ರೂಪರಾದ ಈ ಸೂರ್ಯಚಂದ್ರರು ತಮ್ಮ ಅಸಾಧಾರಣವಾದ ಜ್ಞಾನದಿಂದ ಕೂಡಿದವರಾಗಿ ಪರ್ಯಾಯರೂಪದಲ್ಲಿ ಸಂಚರಿಸುತ್ತಾರೆ. ಅಂತರಿಕ್ಷದಲ್ಲಿ ಸಂಚರಿಸುತ್ತಾ ಯಜ್ಞಾಭಿಮುಖವಾಗಿ ಬರುತ್ತಾರೆ. ಈ ಪೈಕಿ ಆದಿತ್ಯನು ಸಕಲ ಲೋಕಗಳನ್ನು ನೋಡುತ್ತಾನೆ. ಇನ್ನೊಬ್ಬ ಚಂದ್ರನು ವಸಂತಾದಿ ಋತುಗಳನ್ನೂ ನಿಯಮಿಸುತ್ತಾ ಪುನಃ ಪುನಃ ಉತ್ಪನ್ನನಾಗು ತ್ತಾನೆ. ||೧೮||

ಚಂದ್ರನು ಪ್ರತಿದಿನವೂ ಉತ್ಪನ್ನನಾಗುತ್ತ ಪ್ರತಿದಿನವೂ ಹೊಸಬನಾಗಿ ಕಾಣುತ್ತಾನೆ. ಪಾಡ್ಯಮೇ ಮುಂತಾದ ದಿನಗಳಿಗೆ ಪ್ರಜ್ಞಾಪಕನಾದ

ಚಂದ್ರನು ಉಷಸ್ಸುಗಳ ಮುಂಭಾಗದಲ್ಲಿ ಹೋಗುತ್ತಾನೆ. ತನ್ನ ದೈನಂದಿನದ ಕ್ರಮದಲ್ಲಿ ಆವಿರ್ಭವಿಸುತ್ತಾ ದೇವತೆಗಳಿಗೆ ಯಜ್ಞಭಾಗವನ್ನು ನಿಯಮಿಸುತ್ತಾನೆ. ದೀರ್ಘವಾದ ಆಯುಸ್ಸನ್ನು ಬೆಳೆಸುತ್ತಾನೆ ॥೧೯॥

ಎಲೈ ಸೂರ್ಯಾದೇವಿಯೇ ಉತ್ತಮವಾದ ಕಿಂಶುಕ ಮತ್ತು ಶಾಲ್ಮಲಿ ವೃಕ್ಷಗಳಿಂದ ನಿರ್ಮಿತವಾದ ಅನೇಕ ರೂಪಉಳ್ಳದ್ದೂ ಸುವರ್ಣಮಯವಾದ ಅಲಂಕಾರಉಳ್ಳದ್ದೂ ಉತ್ತಮವಾದ ಹೊದ್ದಿಕೆಯುಳ್ಳದ್ದೂ ಶ್ರೇಷ್ಠ ಚಕ್ರವುಳ್ಳದ್ದೂ ಆದ ರಥವನ್ನು ಹತ್ತಿ ಕುಳಿತುಕೊ. ನಿನ್ನ ಪತಿಯಲ್ಲಿಗೆ ನೀನು ಹೋಗುವಾಗ ಮರಣರಹಿತವಾದ ದೇವಲೋಕವನ್ನು ಸುಖಕರವನ್ನಾಗಿ ಮಾಡು ।೨೦॥

ಎಲೈ ವಿಶ್ವಾವಸುವೇ ಈ ಕನ್ಯೆಯು ವಿವಾಹಿತಳಾಗಿ ತನ್ನ ಪತಿಯನ್ನು ಹೊಂದಿದ್ದಾಳೆ. ಆದ್ದರಿಂದ ಈ ಪ್ರದೇಶವನ್ನು ಬಿಟ್ಟು ಎದ್ದೇಳು ಎಂದು ವಿಶ್ವಾವಸು ಸಂಜ್ಞಕನಾದ ಗಂಧರ್ವನನ್ನು ನಮಸ್ಕಾರಪೂರ್ವಕವಾಗಿಯೂ ಸ್ತುತಿಪೂರ್ವಕವಾಗಿಯೂ ಸ್ತುತಿಸಿ ಪ್ರಾರ್ಥಿಸುತ್ತೇನೆ ಪಿತೃಗೃಹದಲ್ಲಿ ವಿವಾಹವಾಗದ ಕನ್ಯೆಯು ಮಾತ್ರ ನಿನಗೆ ಸೇರಿದ ಭಾಗವೆಂದು ತಿಳಿ ॥೨೧॥

ಎಲೈ ವಿಶ್ವಾವಸುವೇ ನಮಸ್ಕಾರಪೂರ್ವಕವಾಗಿ ನಿನ್ನನ್ನೇ ಸ್ತುತಿಸಿ ಪ್ರಾರ್ಥಿಸುತ್ತೇವೆ ಈ ಪ್ರದೇಶದಿಂದ ಎದ್ದೇಳು. ಪುಷ್ಟವಾದ ನಿತಂಬ ಪ್ರದೇಶವುಳ್ಳ. ಬೇರೊಬ್ಬ ಕನ್ಯೆಯನ್ನಪೇಕ್ಷಿಸು. ಬೇರೊಬ್ಬನಿಗೆ ಪತ್ನಿಯಾದ ನನ್ನನ್ನು ನನ್ನ ಪತಿಯೊಂದಿಗಿರಲು ಬಿಟ್ಟುಕೊಡು ॥೨೨

ಯಾವ ಮಾರ್ಗಗಳಿಂದ ನಮ್ಮ ಮಿತ್ರರು ವರರಿಂದ ಪ್ರಾರ್ಥಿಸಲ್ಪಡುವ ಕನ್ಯೆಯು ತಂದೆಯ ಬಳಿಗೆ ಹೋಗುವರೋ ಅಂತಹ ಮಾರ್ಗಗಳು ಕಂಟಕರಹಿತವಾಗಿಯೂ, ವಕ್ರವಿಲ್ಲದೆಯೂ ಇರಲಿ. ಅರ್ಯಮದೇವನು ನಮ್ಮನ್ನು ಸರಿಯಾಗಿ ಕರೆದೊಯ್ಯಲಿ. ಭಗನು ನಮಗೆ ಸರಿಯಾದ ಮಾರ್ಗವನ್ನು ತೋರಲಿ. ಎಲೈ ದೇವತೆಗಳೇ ದಂಪತಿಗಳ ಪರಸ್ಪರ ಸಂಬಂಧವು ತೃಪ್ತವಾಗಿ ಹೊಂದಿಕೊಳ್ಳಲಿ ॥೨೩।

ಎಲೈ ವಧುವೇ ಯಾವ ಪಾಶದಿಂದ ಉತ್ತಮ ಸುಖಕಾರಕನಾದ ಸವಿತೃದೇವನು ನಿನ್ನನ್ನು ಬಂಧಿಸಿದ್ದನೋ ಅಂತಹ ವರುಣನ ಬಂಧನದಿಂದ ನಿನ್ನನ್ನು ಬಿಡಿಸುತ್ತೇನೆ. ಯಜ್ಞಕ್ಕೆ ಸ್ಥಾನವೂ ಉತ್ತಮವಾದ ಕರ್ಮಕ್ಕೆ ಕ್ಷೇತ್ರವೂ ಆದ ಭೂಲೋಕದಲ್ಲಿ ಹಿಂಸಾರಹಿತಳಾದ ನಿನ್ನನ್ನು ನಿನ್ನ ಪತಿಯ ಜೊತೆಯಲ್ಲಿ ಸ್ಥಾಪಿಸುತ್ತೇನೆ ||೨೪||

ಎಲೈ ವಧುವೇ ಪಿತೃಕುಲದಿಂದ ನಿನ್ನನ್ನು ಬಿಡಿಸುತ್ತೇನೆ. ಪತಿ ಗೃಹದಿಂದ ಬಿಡಿಸುವುದಿಲ್ಲ. ನಿನ್ನನ್ನು ಪತಿಗೃಹದಲ್ಲಿ ಭದ್ರವಾಗಿರುವಂತೆ ಮಾಡುತ್ತೇನೆ. ಕಾಮವರ್ಷಕನಾದ ಎಲೈ ಇಂದ್ರನೇ ಯಾವ ರೀತಿ ಈ ಈ ಕನ್ಯೆಯು ಉತ್ತಮವಾದ ಪುತ್ರರುಳ್ಳವಳೂ ಸೌಭಾಗ್ಯವುಳ್ಳವಳೂ ಆಗ ವಳೋ ಆ ರೀತಿ ಅನುಗ್ರಹಿಸು ||೨೫||

ಎಲೈ ವಧುವೇ ಪೂಷದೇವನು ನಿನ್ನ ಕೈಯನ್ನು ಹಿಡಿದು ಇಲ್ಲಿಂದ ಕರೆದೊಯ್ಯಲಿ ಅಶ್ವಿನೀ ದೇವತೆಗಳು ನಿನ್ನನ್ನು ರಥದಲ್ಲಿ ಕರೆದುಕೊಂಡು ಹೋಗಲಿ. ನೀನು ಪತಿಗೃಹಕ್ಕೆ ಹೋಗಿ ಗೃಹಪಾಲಕಳಾಗಿರು. ಪತಿಯು ವಶದಲ್ಲಿದ್ದು ಭೃತ್ಯಾದಿನಗಳಿಗೆ ಸರಿಯಾದ ನಿರ್ದೇಶನವನ್ನು ಕೊಡುತ್ತಿರು||೨೬||

ಎಲೈ ವಧುವೇ ಈ ಪತಿಗೃಹದಲ್ಲಿ ಪುತ್ರಾದಿಗಳೊಡನೆ ಕೂಡಿದ ಪ್ರೀತಿಯು ನಿನಗೆ ಬೆಳೆಯಲಿ. ನೀನು ಈ ಗೃಹದ ಪಾಲಕಳಾಗಿರಲು ಎಚ್ಚರ ವಾಗಿರು. ನಿನ್ನ ಪತಿಯೊಂದಿಗೆ ಸೇರಿ ತಾದಾತ್ಮ್ಯವನ್ನು ಹೊಂದು. ಕಾಲಾನಂತರ ವೃದ್ಧರಾಗ ನೀವಿಬ್ಬರೂ ನಿಮ್ಮ ಗೃಹದಲ್ಲಿರುವ ಪುತ್ರಾದಿಗಳಿಗೆ ನಿರ್ದೇಶನವನ್ನು ಕೊಡುತ್ತೀರಿ ||೨೭||

ಕೃತ್ಯಾಸಂಜ್ಞಕಳಾದ ಮಾಂತ್ರಿಕ ಶಕ್ತಿಯುಳ್ಳ ದೇವತೆಯು ನೀಲ ಮತ್ತು ಕೆಂಪು ಬಣ್ಣವುಳ್ಳವಳಾಗಿರುತ್ತಾಳೆ. ಈ ವಧುವಿನಲ್ಲಿ ಅಂಟಿಕೊಂಡಿ ರುವ ಆ ಕೃತ್ಯೆಯು ತ್ಯಜಿಸಲ್ಪಡುತ್ತಾಳೆ. ಆನಂತರ ಈ ವಧುವಿನ ಬಂಧು ಗಳು ಪ್ರವೃದ್ಧರಾಗುತ್ತಾರೆ. ಇವಳ ಪತಿಯು ಸಾಂಸಾರಿಕವಾದ ಬಂಧನ ದಲ್ಲಿ ನಿಯುಮಿತನಾಗುತ್ತಾನೆ ||೨೮||

ಎಲೈ ವಧುವೇ ದೇಹದ ಕೊಳೆಯಿಂದ ಮಲಿನವಾದ ವಸ್ತ್ರವನ್ನು ದೂರಹಾಕು ವೇದ ವಿತ್ತುಗಳಿಗೆ ಧನವನ್ನು ಹಂಚು. ಕೃತ್ಯಾಸಂಜ್ಞಕಳಾದ ಈ ದೇವಿಯು ಕಾಲುಗಳನ್ನು ಹೊಂದಿದವಳಾಗಿ ಪಕ್ಷಿಯ ರೂಪವನ್ನು ಹೊಂದಿ ನಿನ್ನ ಪತಿಯನ್ನು ಪ್ರವೇಶಿಸುತ್ತಾಳೆ. ||೨೯||

ಪತಿಯಾದವನು ಯಾವಾಗ ವಧುವಿನ ವಸ್ತ್ರದಿಂದ ತನ್ನ ಶರೀರವನ್ನು ಹೊದಿಯಲಿಚ್ಛಿಸುವನೋ ಆಗ ಪಾಪಿಷ್ಠಳಾದ ಈ ಕೃತ್ಯಾದೇವಿಯ ಸಂಸರ್ಗ ದಿಂದ ಪ್ರಕಾಶಿಸುವ ಅವನ ಶರೀರವು ಕಾಂತಿರಹಿತವಾಗಿ ಆಗುತ್ತದೆ. ||೩೦

ಸಮ್ಮ ಶತ್ಮಗಳಿಂದ ಯಾವ ವ್ಯಾಧಿಯು ವಧುವಿನ ಹಿರಣ್ಯ ರೂಪ ವಾದ ಶರೀರವನ್ನು ಪ್ರವೇಶಿಸಿ ಕಾಂತಿರಹಿತವನ್ನಾಗಿ ಮಾಡುವುವೋ ಆ ವ್ಯಾಧಿಗಳನ್ನು ಅವು ಬಂದಲ್ಲಿಗೇ ಹಿಂತಿರುಗಲಿ. ||೩೧||

ದಾರಿಗಳ್ಳರು ಈ ಹೊಸ ದಂಪತಿಗಳನ್ನೆದುರಿಸುತ್ತ ಬರುವರೋ ಅವರು ಇವರನ್ನು ಸಮೀಪಿಸದಂತಾಗಲಿ ಇವರು ತಮ್ಮ ಕಠಿನವಾದ ಮಾರ್ಗವುಳ್ಳ ಪ್ರದೇಶವನ್ನು ಸುಖವಾಗಿ ದಾಟಲಿ ಇವರ ಶತ್ರುಗಳು ದೂರಕ್ಕೆ ಓಡಲಿ. ||೩೨||

ಎಲೈ ಹಿರಿಯರೇ ಈ ವಧುವು ಮಂಗಳಕರವಾದ ಸ್ವರೂಪವುಳ್ಳವಳು ಇವಳನ್ನು ಸಮೀಪಿಸಿ ಇವಳಿಗೆ ಆಶೀರ್ವಚನವನ್ನು ಅನುಗ್ರಹಿಸಿದ ನಂತರ ನಿಮ್ಮ ನಿಮ್ಮ ಗೃಹಕ್ಕೆ ತೆರಳಿರಿ ||೩೩||

ಈ ವಸ್ತ್ರವು ದಾಹಜನಕವಾಗಿದೆ, ಕಷಾಯಾತ್ಮಕವಾಗಿದೆ, ಋಜೀಷ ಸಂಜ್ಞಕವಾದ ಹಳೆಯ ಸೋಮದಂತಿರುತ್ತದೆ, ವಿಷದಂತಿದೆ, ಇದು ಉಪ ಯೋಗಿಸಲು ಅರ್ಹವಾಗಿಲ್ಲ, ಸೂರ್ಯಾದೇವಿಯ ಸ್ವರೂಪವನ್ನರಿತ ಬ್ರಾಹ್ಮಣನು ಮಾತ್ರ ಈ ವಧುವಿನ ವಸ್ತ್ರವನ್ನು ಹೊಂದಲು ಅರ್ಹನಾಗು ತ್ತಾನೆ. ||೩೪||

ಪಾರ್ಶ್ವವರ್ತಿಯಾದ ಆಶನ ಸಂಜ್ಞಕವೂ ಶಿರೋಧಾಯಿಯಾದ ವಿಶಸನ ಸಂಜ್ಞಕವೂ ವಿಭಾಗಾತ್ಮಕವಾದ ಅಧಿವಿಕರ್ತನ ಸಂಜ್ಞಕವೂ ಆದ ಸೂರ್ಯಾ ದೇವಿಯ ಮೂರು ರೂಪಗಳನ್ನೂ (ವಸ್ತ್ರಗಳನ್ನು) ನೋಡು. ಅವುಗಳನ್ನು ಮಂತ್ರವಿತ್ತಾದ ಪುರುಷನು ಮಾತ್ರ ದೂರ ಮಾಡುತ್ತಾನೆ ||೩೫||

ನಿನ್ನ ಹಸ್ತವನ್ನು ಶ್ರೇಯಸ್ಸಾಧನೆಗಾಗಿ ಹಿಡಿಯುತ್ತೇನೆ. ಇದೇ ಸಂಬಂಧದಿಂದ ನಿನ್ನ ಪತಿಯಾದ ನನ್ನೊಡನೆ ವಾರ್ಧಕ್ಯವನ್ನು ಹೊಂದುವ ವರೆಗೂ ನನ್ನೊಡನಿರು ದೇವತಾಸ್ವರೂಪರಾದ ಭಗನೂ ಅರ್ಯಮನೂ ಸವಿತೃವೂ ಪೂಷದೇವನೂ ನಿನ್ನನ್ನು ನನಗೆ ಗೃಹಸ್ಥನಾಗಲು ದಾನಮಾಡಿದ್ದಾರೆ ||೩೬||

ಎಲೈ ಪೂಷದೇವನೇ ಯಾವಳಲ್ಲಿ ರೇತೋರೂಪವಾದ ಬೀಜವನ್ನು ಮಾನವರು ಸ್ಥಾಪಿಸುವರೋ ಯಾಗು ನಮ್ಮ ಸಂಗವನ್ನಪೇಕ್ಷಿಸುತ್ತ ನಮ್ಮನ್ನು ಆದರಿಸುವಳೋ ಯಾವಳಲ್ಲಿ ಪುತ್ರರನ್ನಿಚ್ಛಿಸಿ ನಾವು ಪುತ್ರೋತ್ಪಾದಕವಾದ ಬೀಜವನ್ನು ಸ್ಥಾಪಿಸುವೆವೋ ಅವಳು ನಮ್ಮನ್ನು ಪ್ರೀತಿಸುವಂತೆ ಪ್ರೇರಿಸು ||೩೭||

ಎಲೈ ಅಗ್ನಿಯೇ ಮೊದಲು ಗಂಧರ್ವರು ಸೂರ್ಯೆಯನ್ನು ಬಳುವಳಿಗಳೊಂದಿಗೆ ನಿನಗೆ ಕೊಟ್ಟರು. ಈಗ ನೀನು ಮಾನವ ರೂಪವಾದ ನಮಗೆ ಸಂತಾನಯೋಗ್ಯಳಾದ ಪತ್ನಿಯನ್ನು ಕೊಡು. ||೩೮||

ಅಗ್ನಿಯು ತಾನು ಪಡೆದನಂತರ ಮಾನವನಿಗೆ ದೀರ್ಘಾಯುಷ್ಮಂತಳೂ, ತೇಜಸ್ವಿನಿಯೂ ಆದ ಪತ್ನಿಯನ್ನು ಕೊಟ್ಟನು ಇವಳಿಗೆ ಯಾವ ಪತಿಯಾಗುವನೋ ಅವನು ದೀರ್ಘಾಯುಷ್ಮಂತನಾಗಿ ನೂರು ವರ್ಷಕಾಲ ಜೀವಿಸಲಿ ||೩೯||

ಮುಂದಿನ ಮಂತ್ರಾರ್ಥಗಳು ವಿವಾಹಾ ನಂತರ ಬ್ರಾಹ್ಮಣರ ಆಶೀರ್ವಾದ ಎಂಬಲ್ಲಿವೆ,

ನ ಹೇರಣ್ಯಾಯ ಚಕ್ಷಸೇ || ಯೋಽವಶ್ಯಿವ ತವೋ ರಸಸ್ತಸ್ಯ

ಭಾಜಯತೇ ಹ ನಃ । ಉಶತೀರಿವ ಮಾತರಃ ॥ ತಸ್ಮಾ ಅರಂಗ ಮಾಮ ವೋ

ಯಸ್ಯ ಕ್ಷಯಾಯ ಜಿನ್ವಥ । ಆಪೋ ಜನಯಥಾ ಚ ನಃ ॥

ಆಪೋ ಯಂ ವಃ ಪ್ರಥಮಂ ದೇವಯಂತ ಇಂದ್ರಪಾನ ಮೂರ್ಮಿ-

ಮಕೃಣ್ವ ತೇಳಃ । ತಂ ವೋ ವಯಂ ಶುಚಿ ಮರಿಪ್ರಮದ್ಯ ಘೃತಪ್ರುಷು

ಮಧು ಮಂತಂ ವನೇಮ॥ ತಮೂರ್ಮಿ ಮಾಪೋ ಮಧು ಮತ್ತಮಂ

ವೋಽಪಾನ್ನ ಪಾದವತ್ವಾಶು ಹೇಮಾ । ಯಸ್ಮಿನ್ನಿಂದ್ರೋ ವಸುಭಿ

ರ್ಮಾದಯಾ ತೇ ತಮಶ್ಯಾಮ ದೇವ ಯಂತೋ ವೋ ಅದ್ಯ ॥

ಶತ ಪವಿತ್ರಾ ಸ್ವಧಯಾ ಮದಂತೀ ರ್ದೇವೀರ್ದೇವಾನಾ ಮಪಿ ಯಂತಿ

ಪಾಥಃ । ತಾ ಇಂದ್ರಸ್ಯ ನ ಮಿನಂತಿ ವ್ರತಾನಿ ಸಿಂಧುಭ್ಯೋ ಹವ್ಯಂ

ಘೃತವಜ್ಜು ಹೋತ॥ಯಾ ಸೂರ್ಯೋ ರಶ್ಮಿಭಿ ರಾತತಾನ ಯಾಭ್ಯ

ಇಂದ್ರೋ ಅರದ ದ್ವಾಗತು ಮರೂರ್ಮಿಂ। ತೇ ಸಿಂಧವೋ ವರೀವೋ ಧಾತನಾ

ನೋ ಯೂಯಂ ಪಾತ ಸ್ವಸ್ತಿಭಿ ಸ್ಸದಾ ನಃ ॥ (ಮಂತ್ರಾರ್ಥ-*)

(ಕನ್ಯಾದಾತನು ಸಂಕಲ್ಪಮಾಡಿ ನಮ್ಮ ಸಮಸ್ತ ಪಿತೃಗಳಿಗೂ ಅತಿಶಯ ವಾದ ಆನಂದವುಂಟಾಗಿ ಬ್ರಹ್ಮಲೋಕ ಪ್ರಾಪ್ತಿಯಾಗುವುದರ ಮೂಲಕ ಶಾಸ್ತ್ರದಲ್ಲಿ ಹೇಳಿರುವಂತೆ ಕನ್ಯಾದಾನ ಫಲ ಪ್ರಾಪ್ತಿಯಾಗಲೆಂದೂ ಶ್ರೀ ಪರಮೇಶ್ವರ ಪ್ರೀತಿಯಾಗಲೆಂದೂ ಇಚ್ಛಿಸಿ ವಧೂವರರನ್ನು ಸಾಕ್ಷಾತ್ ಲಕ್ಷ್ಮೀನಾರಾಯಣರೆಂದು ಭಾವಿಸಿ ಗಂಧಪುಷ್ಪಾದಿಗಳಿಂದ ಪೂಜಿಸಿ ತನ್ನ ಇಷ್ಟ ದೇವರನ್ನು ಗುರುಹಿರಿಯರನ್ನು ನಮಸ್ಕರಿಸಿ ಅವರಿಂದ ಕನ್ಯಾದಾನಕ್ಕೆ ಅಪ್ಪಣೆ ಯನ್ನು ಪಡೆದು ಬಂದು ವರನ ಕೈಯಲ್ಲಿ ಕನ್ಯಾ ಹಸ್ತವನ್ನಿಟ್ಟು ತಾಂಬೂಲ ದಕ್ಷಿಣೆಗಳನ್ನಿಟ್ಟು ಸಪತ್ನಿಕನಾಗಿ ಹಿಂದೆ ಅಬ್ದೇವತಾಕ ಮಂತ್ರಗಳಿಂದ ಅಭಿ ಮಂತ್ರಿಸಲ್ಪಟ್ಟ ಕಲಶೋದಕವನ್ನು ತನ್ನ ಕೈಯಲ್ಲಿಟ್ಟುಕೊಂಡು ಕನ್ಯೆಯ ದಕ್ಷಿಣ ಬಾಹುವನ್ನು ಮುಟ್ಟಿಕೊಂಡಿರಲಾಗಿ ಧರ್ಮಪತ್ನಿಯು ಕಲಶೋದಕ ವನ್ನು ಹಾಕುತ್ತಿರುತ್ತಾಳೆ.

ಕನ್ಯಾದಾತನು ಈ ದಾನಕ್ಕೆ ಮುಂಚೆ ತಾನು ದಾನಕ್ಕಾಗಿ ಸಂಕಲ್ಪ ಮಾಡುವುದು ಸರಿಯಷ್ಟೆ. ಮಹಾಸಂಕಲ್ಪವನ್ನು ಪಾರಾಯಣಮಾಡಿ ನಂತರ ಕನ್ಯಾದಾನವನ್ನು ಮಾಡುತ್ತೇನೆಂದು ಸಂಕಲ್ಪಿಸಿರುತ್ತಾನೆ.)

ಮಂತ್ರಾರ್ಥ :- ಆಪೋಹಿಷ್ಠಾ ... ... ... ... ಚನಃ || *

ಎಲೈ ಅಬ್ದೇವತೆಗಳಿರಾ. ಸುಖದಾತ್ರಿಯರಾಗಿಯೂ ಮಹಾತ್ಮ ರಾಗಿಯೂ ಇರುವ ನೀವು ನಮ್ಮನ್ನು ಅನ್ನಕ್ಕೆ ಪಾತ್ರರನ್ನಾಗಿಯೂ ದರ್ಶನಕ್ಕೆ ಯೋಗ್ಯರನ್ನಾಗಿಯೂ ಮಾಡಿರಿ ॥ ೧ ॥

ಎಲೈ ಅಬ್ದೇವತೆಗಳಿರಾ ಯಾವನಿಮ್ಮರಸವು ಅತ್ಯಂತ ಸುಖಕರವಾಗಿರುವುವೋ ಅಂತಹರಸವನ್ನು ಪುತ್ರನ ಪುಷ್ಟಿಯನ್ನಪೇಕ್ಷಿಸುವ ತಾಯಿಯರು ಮಕ್ಕಳಿಗೆ ಸ್ತನ್ಯಪಾನವನ್ನು ಮಾಡಿಸುವಂತೆ ನಮ್ಮಿಂದ ಪಾನ ಮಾಡಿಸಿರಿ || ೨ ||

ಎಲೈ ಅಬ್ದೇವತೆಗಳಿರಾ ನಾವು ಮಾಡಿದ ಪಾಪವನ್ನು ಹೋಗಲಾಡಿಸುವುದಕ್ಕಾಗಿ ನಿಮ್ಮನ್ನು ಪ್ರೀತಿಸುತ್ತಾ ಬೇಗನೆ ನಿಮ್ಮನ್ನು ಆಶ್ರಯಿಸುವೆವು. ನಮಗೆ ಸಂತಾನೋತ್ಪತ್ತಿಯಾಗುವಂತೆ ಮಾಡಿ || ೩ ||

ಆಪೋಯಂ ವಃ... ಸದಾನಃ || ಎಲೈ ಅಬ್ದೇವತೆಗಳಿರಾ ನಿಮಗೆ ಸೇರಿದ ಇಂದ್ರ ವಾಸಕ್ಕೆ ಯೋಗ್ಯವಾದ ಪೃಥ್ವಿಯಿಂದುತ್ಪನ್ನವಾದ ಯಾವ ಸೋಮ ರಸವನ್ನು ಮುಂಚೆ ದೇವಪೂಜಾಕಾಂಕ್ಷಿಗಳಾದ ಅಧ್ವರ್ಯುಗಳು ಅಭಿಷವಾದಿಗಳಿಂದ ಉತ್ಪನ್ನಮಾಡಿದರೋ ಅಂತಹ ನಿಮಗೆ ಸಂಬಂಧಿಸಿದ ಪರಿಶುದ್ಧವಾದ ಪಾಪರಹಿತವಾದ ಮಳೆಯನ್ನು ಸುರಿಸತಕ್ಕ ಮತ್ತು ಮಧುರರಸವನ್ನು ಹೊಂದಿರುವ ಆ ಸೋಮವನ್ನು ಈ ಯಾಗಕಾಲದಲ್ಲಿ ನಾವೂ ಪಾನಮಾಡುವಂತಾಗಲಿ.

ಎಲೈ ಅಬ್ದೇವತೆಗಳೇ ನಿಮ್ಮ ಸಂಬಂಧವೂ ಪ್ರಸಿದ್ಧವೂ ರುಚಿಕರವೂ ಆದ ಸೋಮರಸವನ್ನು ಶೀಘ್ರಗಾಮಿಯೂ ಅಪಾನ್ನಪಾತ್ಸಂಜ್ಞಕನೂ ಆದ ದೇವನು ರಕ್ಷಿಸಲಿ. ಈ ಸೋಮರಸದಲ್ಲಿ ಇಂದ್ರನು ವಸುಸಂಜ್ಞಕರಾದ ದೇವತೆಗಳೊಡನೆ ಕೂಡಿಕೊಂಡು ಸಂತೋಷಯುಕ್ತನಾಗುವನೋ ಅಂತಹ ನಿಮ್ಮ ಸುಬಂಧವಾದ ಅದೇ ರಸವನ್ನು ಈ ಯಾಗದಿನದಲ್ಲಿ ದೇವಪೂಜಾಕಾಂಕ್ಷಿಗಳಾದ ನಾವೂ ಸಹ ಹೊಂದುವಂತಾಗಲಿ.

ಶುದ್ಧಿಕಾರಕಗಳಾದ ಅನೇಕರೂಪಗಳನ್ನುಳ್ಳ ತಮ್ಮಿಂದಲೇ ಉತ್ಪನ್ನವಾದ ಅನ್ನದಿಂದ ಹರ್ಷವನ್ನು ಹೊಂದುವ ಮತ್ತು ಪ್ರಕಾಶಯುಕ್ತಗಳಾದ

ಉದಕಗಳು ಇಂದ್ರಾದಿದೇವತೆಗಳ ಸ್ಥಾನವನ್ನು ಪ್ರವೇಶಿಸುತ್ತವೆ. ಅದೇ ಉದಕಗಳು ಇಂದ್ರನಿಗೆ ತೃಪ್ತಿಕರವಾದ ಯಜ್ಞಾದಿಕರ್ಮಗಳನ್ನು ಹಿಂಸಿಸುವುದಿಲ್ಲ. ಎಲೈ ಅಧ್ವರ್ಯುಗಳೇ ಪ್ರವಾಹಾತ್ಮಕಗಳಾದ ಅದೇ ಉದಕಗಳಿಗೆ ಆಜ್ಯಪೂರಿತವಾದ ಹವಿಸ್ಸನ್ನು ಆಹುತಿರೂಪದಲ್ಲಿ ಅರ್ಪಿಸಿರಿ.

ಪ್ರವಾಹಾತ್ಮಕಗಳಾದ ಉದಕಗಳೇ ಸೂರ್ಯನು ನಿಮ್ಮನ್ನು ತನ್ನ ಕಿರಣಗಳಿಂದ ವಿಸ್ತರಿಸುವಂತೆ ಮಾಡಿದನೋ ನಿಮ್ಮ ಮೂಲಕ ಇಂದ್ರನು ಗಮನ ಸಾಧನವಾದ ಮೋಡಗಳಿಗೆ ಸಂಚಾರ ಯೋಗ್ಯವಾದ ಮಾರ್ಗವನ್ನು ವಜ್ರದ ಸಹಾಯದಿಂದ ನಿರ್ಮಿಸಿದನೋ ಅಂತಹ ನೀವು ನಮಗೆ ಧನವನ್ನು ಕೊಡಿರಿ. ಎಲೈ ದೇವತೆಗಳೇ ನೀವು ನಮ್ಮನ್ನು ಯವಾಗಲೂ ಶುಭಗಳಿಂದ ರಕ್ಷಿಸಿರಿ.

## ಮಹಾಸಂಕಲ್ಪವನ್ನು ಏತಕ್ಕೆ ಹೆಳಿಸ ಬೇಕೆಂಬ ವಿಷಯು.

ಮೇಲಿನ ಅತಲ ವಿತಲಾದಿ ಸಪ್ತಲೋಕಗಳು. ಭುವರ್ಲೋಕಾದಿ ಅಧೋಲೋಕಗಳು, ಅಷ್ಟದಿಗ್ಗಜಗಳು, ಅಯೋಧ್ಯಾದಿ ಅನೇಕ ಪುಣ್ಯ ಪಟ್ಟಣಗಳು, ಅಷ್ಟದಿಕ್ಪಾಲಕರು, ಅಷ್ಟವಸುಗಳು, ನವಗ್ರಹಗಳು, ಸಪ್ತಮರುತ್ತುಗಳು, ದಶಾರಣ್ಯಗಳು, ಏಕಾದಶರುದ್ರರು, ದ್ವಾದಶಾದಿತ್ಯರು, ಮೂವತ್ತೆರಡು ಆಯುಧಗಳು, ಹದಿನಾರು ಜನ ಮಹಾರಾಜರು ಹದಿನೆಂಟು ದೇವಿಪೀಠಗಳು, ವಿಶ್ವಾಮಿತ್ರಾದ್ಯನೇಕ ಮಹರ್ಷಿಗಳು, ಸಪ್ತಪರ್ವತಗಳು, ಐದು ದೊಡ್ಡಬೆಟ್ಟಗಳು, ಸಪ್ತಸಮುದ್ರಗಳು, ವೇದವೇದಾಂಗೇತಿಹಾಸಾದಿ ಚತುಷ್ಷಷ್ಟಿವಿದ್ಯೆಗಳು ಅಂಗವಂಗಕಳಿಂಗಾದಿ ಐವತ್ತಾರು ದೇಶಗಳು, ಭಾಗೀರಥ್ಯಾದಿ ಮಹಾನದಿಗಳು ವಾರಾಣಸ್ಯಾದಿ ಅನೇಕ ಪುಣ್ಯಕ್ಷೇತ್ರಗಳು. ಹರಿಶ್ಚಂದ್ರಾದಿ ಆರುಜನ ಚಕ್ರವರ್ತಿಗಳು, ಸಪ್ತಮಾತೃಗಳು, ಸಾವಿತ್ರ್ಯಾದಿ ಮಹಾಪತಿವ್ರತೆಯರು, ರಮ್ಯ ರಮಣಕಾದಿ ಹದಿನೆಂಟು ದ್ವೀಪಗಳು. ಜಂಬೂಪ್ಲಕ್ಷಾದಿ ಸಪ್ತದ್ವೀಪಗಳು, ಭಾರತ ಕಿಂಪುರುಷಾದಿ ಒಂಬತ್ತುವರ್ಷಗಳು, ನವಖಂಡಗಳು, ಹದಿನಾರುಜನ ಮಹಾಭಾಗವತರು, ಸಪ್ತಕಲ್ಪಗಳು, ಹದಿನಾಲ್ಕು ಮನ್ವಂತರಗಳು, ಚತು

ರ್ಯುಗಗಳು, ಷಷ್ಟಿಸಂವತ್ಸರಗಳು, ಅಯನಗಳು, ಋತುಗಳು, ಮಾಸಗಳು, ಪಕ್ಷಗಳು ತಿಥಿಗಳು, ವಾರಗಳು, ನಕ್ಷತ್ರಗಳು, ಯೋಗ ಕರಣ, ಇವುಗಳನ್ನೆಲ್ಲಾ ಸ್ಮರಣೆ ಮಾಡಿಕೊಂಡು, ಮುಹೂರ್ತದ ದಿನದ ತಿಥಿ,ವಾರ, ನಕ್ಷತ್ರಾದಿಗಳನ್ನು ಹೇಳಿಕೊಂಡು, ಹಿಂದಿನ ಹತ್ತು ತಲೆಯ ಪೂರ್ವಿಕರು ಮುಂದಿನ ಹತ್ತು ತಲೆಯವರು ಮತ್ತು ತನ್ನ ವಂಶದ ಪಿತೃಗಳೂ, ತಾನೂ ನರಕದಿಂದ ದಾಟಿ ಶಾಶ್ವತ ಬ್ರಹ್ಮಲೋಕ ನಿವಾಸ ಸಿದ್ಧಿಗೋಸ್ಕರ. ಅಗ್ನಿಷ್ಟೋಮಾದಿ ಸಮಸ್ತ ಯಾಗ ಫಲಪ್ರಾಪ್ತ್ಯರ್ಥವಾಗಿ, ಈ ಜನ್ಮ ಜನ್ಮಜನ್ಮಾಂತರಗಳಲ್ಲಿ, ಬಾಲ್ಯ ಕೌಮಾರ ಯವ್ವನ ವಾರ್ಧಕ್ಯ, ಜಾಗ್ರತ್ಸ್ವಪ್ನಸುಷುಪ್ತಿ ಅವಸ್ಥೆಗಳಲ್ಲಿಯೂ, ತಿಳಿದೂ, ತಿಳಿಯದೆಯೊ, ಇಷ್ಟವಿದ್ದೋ ಇಷ್ಟವಿಲ್ಲದೆಯೋ, ತನ್ನ ಬುದ್ಧಿಯಿಂದಲೋ ಅನ್ಯರ ಪ್ರೇರಣೆಯಿಂದಲೋ, ಉಂಟಾದ ಸಮಸ್ತ ಪಾಪಪರಿಹಾರಕ್ಕೋಸ್ಕರ, ಇಷ್ಟದೇವತಾ ಪ್ರೀತಿಗೋಸ್ಕರ, ಧರ್ಮಾರ್ಥ ಕಾಮಮೋಕ್ಷ ಚತುರ್ವಿಧಫಲ ಪುರುಷಾರ್ಥಸಿದ್ಧಿಗೋಸ್ಕರ. ಕ್ಷೇಮಾಯುರಾರೋಗ್ಯ, ಐಶ್ವರ್ಯ, ಅಭಿವೃದ್ಧಿಗೋಸ್ಕರ, ಮತ್ಸ್ಯಪುರಾಣದಲ್ಲಿ ಹೇಳಲ್ಪಟ್ಟ ಷೋಡಶ ಮಹಾದಾನಗಳಲ್ಲಿ ಒಂದಾದ ಕನ್ಯಾದಾನವನ್ನು ಯಥಾಶಕ್ತಿಯಾಗಿ ಬ್ರಾಹ್ಮಣ ವಿಧಿಯಂತೆ ಮಾಡುತ್ತೇನೆ. ಮತ್ತು ಈ ವರನಿಂದ ಈ ಕನ್ಯೆಯಲ್ಲಿ ಹುಟ್ಟುವ ಸಂತತಿಯಿಂದ ಹನ್ನೆರಡುಜನ ಪೂರ್ವಿಕರನ್ನು ಹನ್ನೆರಡುಜನ ಮುಂದಿನ ಪಿತೃಗಳನ್ನು ಮತ್ತು ತನ್ನನ್ನೂ ಸಹ, ಪಾವನ ಗೊಳಿಸುವುದಕ್ಕೆ, ಬ್ರಾಹ್ಮಣ ವಿವಾಹ ವಿಧಿಯ ಪ್ರಕಾರ ಕನ್ಯಾದಾನವನ್ನು ಮಾಡುತ್ತೇನೆ.

**ಕನ್ಯಾದಾನ :–**

ದಾತಾ ಸಪತ್ನೀಕ ಉತ್ಥಾಯ ಉದಙ್ಮುಖವಿವ ಪೂರ್ವಾರ್ಚಿಕ ಕಲಶೋದಕಂ ಸ್ವಹಸ್ತೇ ಗೃಹೀತ್ವಾ ಕನ್ಯಾಂಸು ಪ್ರತಿಗೃಹ್ಯ–

"ಕನ್ಯಾಂ ಕನಕ ಸಂಪನ್ನಾಂ ಕನಕಾಭರಣೈರ್ಯುತಾಂ |
ದಾಸ್ಯಾಮಿ ವಿಷ್ಣವೇತುಭ್ಯಂ ಬ್ರಹ್ಮಲೋಕ ಜಿಗೀಷಯಾ ||
ವಿಶ್ವಂಭರಃ ಪಂಚಭೂತಾ ಸ್ಸಾಕ್ಷಿಣ್ಯಸ್ಸರ್ವ ದೇವತಾ ಃ
ಇಮಾಂಕನ್ಯಾಂ ಪ್ರದಾಸ್ಯಾಮಿ ಪಿತೃಣಾಂ ತಾರಣಾಯಚ ||

ಎಂದರೆ ಕಾಂತಿಯುಕ್ತಳಾದ ಶುದ್ಧವಾದ ಎಂದರೆ ಸಾತ್ವಿಕ ಗುಣದಿಂದ ಕೂಡಿದ ಯೋಗ್ಯಳಾದ ಮತ್ತು ಸ್ವರ್ಣಾಭರಣಾದಿಗಳಿಂದ ಕೂಡಿದ ಈ ಕನ್ಯೆಯನ್ನು ಬ್ರಹ್ಮಲೋಕ ಪ್ರಾಪ್ತಿಗಾಗಿ ಲಕ್ಷ್ಮೀನಾರಾಯಣ ಸ್ವರೂಪ ನಾದ ನಿನಗೆ ಕೊಡುತ್ತಿದ್ದೇನೆ, ನಮ್ಮ ಪೂರ್ವಾಪರ ಪಿತೃಗಳನ್ನು ಉದ್ಧಾರ ಮಾಡುವುದಕ್ಕೋಸ್ಕರ ಈ ಕನ್ಯೆಯನ್ನು ಕೊಡುತ್ತೇನೆ. ಇದಕ್ಕೆ ಸಮಸ್ತ ದೇವತೆಗಳೂ ಸಾಕ್ಷಿಭೂತರು. ಎಂದುಹೇಳಿ ಕನ್ಯಾಪೂರ್ವಕವಾಗಿ ಗೋತ್ರ ಪ್ರವರಗಳನ್ನು ಹೇಳಿ....ಗೋತ್ರೋತ್ಪನ್ನಳಾದ ಈ ಕನ್ಯೆಯನ್ನು .. ಗೋತ್ರೋದ್ಭವನಾದ .. ಹೆಸರಿನ ನಿನಗೆ ಕನ್ಯಾದಾನ ಮಾಡುವುದರಿಂದ ನಮ್ಮ ಸಮಸ್ತ ಪಿತೃಗಳಿಗೂ ಆತ್ಮಾನಂನಂದವುಂಟಾಗಿ ಬ್ರಹ್ಮಲೋಕ ಪ್ರಾಪ್ತಿಯಗುವುದರ ಮೂಲಕ ನಾನು ಮಾಡಿದ ಈ ಕನ್ಯಾದಾನವು ಸಾರ್ಥಕವಾಗಲೆಂದು ಧರ್ಮ ಪ್ರಜಾ ಸಂಪತ್ತಿಗಾಗಿಯೂ ವರನಿಗೆ ಧಾರೆಯೆರೆದು ಕೊಡುವನು. ಈ ದಾನ ಕಾಲದಲ್ಲಿ ಕನ್ಯಾಮಾತೆಯು ಜಲವನ್ನು ಹಾಕುತ್ತಿರುವಳು.

**"ಸೋದಕೇನ ಏನಾಚಾಥ ಕನ್ಯಾಯಾಃ ಪತಿರುಚ್ಯತೇ"**

ಎಂದು ಹೇಳಿರುವುದರಿಂದ (ಉದಕವನ್ನು ಹಾಕಿಸಿಕೊಳ್ಳದೇ ದಾನ ಮಾಡಿದರೆ ಅದು ದಾನವಾಗುವುದಿಲ್ಲ. ಮತ್ತು ಆ ವರನು ಕನ್ಯೆಯ ಪತಿಯೂ ಆಗುವುದಿಲ್ಲ.)

ಕನ್ಯಾದಾತನೂ ಈ ಸಮಯದಲ್ಲಿ ಮನಸ್ಸಿನಲ್ಲಿ "ಪ್ರಜಾಪತಿಯು ಸುಪ್ರೀತ ನಾಗಲೆಂದು ಸ್ಮರಿಸುತ್ತಾ ಧರ್ಮಾರ್ಥ ಕಾಮಗಳಲ್ಲಿ ಅತಿಕ್ರಮಿಸಿ ಹೋಗಬೇಡವೆಂದು ಹೇಳುತಾನೆ. ವರನೂಸಹ **"ನಾತಿಚರಾಮಿ"** ಅತಿಕ್ರಮಿಸುವುದಿಲ್ಲವೆಂದು ಹೇಳುತ್ತಾನೆ.

ದಾನವನ್ನು ತೆಗೆದುಕೊಂಡ ವರನು ಕನ್ಯೆಯ ದಕ್ಷಿಣಬಾಹುವನ್ನು ಮುಟ್ಟಿಕೊಂಡು"ಕ ಇದಂ ಕಸ್ಮಾಅದಾತ್ಕಾಮಃ ಕಾಮಾಯಾದಾತ್ಕಾಮೋ ದಾತಾ ಕಾಮಃಪ್ರತಿಗೃಹೀತಾ ಕಾಮಂಸಮುದ್ರ ಮಾವಿಶ ಕಾಮೇನತ್ವಾ ಪ್ರತಿ ಗೃಹ್ಣಾಮಿ ಕಾಮೈತತ್ತೇವೃಷ್ಟಿರಸಿ ದ್ಯೌಸ್ತ್ವಾದದಾತು" "ಧರ್ಮ ಪ್ರಜಾ ಸಿಧ್ಯರ್ಥಂ ಕನ್ಯಾಂ ಪ್ರತಿಗೃಹ್ಣಾಮಿ" ಎಂದು ಮೂರಾವರ್ತಿ ಹೇಳುತ್ತಾನೆ

**ಮಂತ್ರಾರ್ಥ** - ಪ್ರಜಾಪತಿಯು ಈ ಧನವನ್ನು ಬ್ರಹ್ಮನಿಗೆ ಕೊಟ್ಟನು. ಇಷ್ಟಾರ್ಥ ಸಿದ್ಧಿಗೋಸ್ಕರ ಕಾಮನು ಕಾಮನಿಗೆ ಕೊಟ್ಟನು ಎಂದರೆ ಮನಸ್ಸಿನಲ್ಲಿ ದಾನಧರ್ಮಾಧಿಗಳನ್ನು ಮಾಡಲು ಅತ್ಯಂತಾಸಕ್ತಿಯುಳ್ಳ ಮಾನವನು ದಾನವನ್ನು ತೆಗೆದುಕೊಳ್ಳುವುದರಲ್ಲಿ ಹೆಚ್ಚು ಆಸೆಯುಳ್ಳ ಮನುಷ್ಯನಿಗೆ ಕೊಟ್ಟನು. ದಾನಮಾಡಲು ಆಸೆಯುಳ್ಳವನೇ ದಾತನು. ದಾನವನ್ನು ತೆಗೆದುಕೊಳ್ಳುವವನೇ ಪ್ರತೀಗ್ರಹೀತೃವು. ಇಂತಹ ಆಸೆಯನ್ನು ಸಮುದ್ರದಲ್ಲಿ ಸೇರಿಸು. ಎಲೈ ನಾನು ತೆಗೆದುಕೊಳ್ಳುವ ದ್ರವ್ಯವೇ: ಆಸೆಯಿಂದಲೇ ನಿನ್ನನ್ನು ಸ್ವೀಕರಿಸುತ್ತಿದ್ದೇನೆ. ಕಾಮವೇ ಅಕಾಮವೆಂಬ ಆಸೆಯಿಂದಲೇ ಪ್ರೇರೇಪಿಸಲ್ಪಟ್ಟವನಾಗಿ ನಿನ್ನನ್ನು ತೆಗೆದುಕೊಳ್ಳುತ್ತಿದ್ದೇನೆ. ನನಗಾಗಿ ಅಲ್ಲ. ಎಲೈ ಕಾಮವೇ ಈ ದ್ರವ್ಯವು ನಿನಗಾಗಿಯೇ ವಿನಾ ನನಗಲ್ಲ. ನೀನು ಸಮಸ್ತ ಕಾರಣ ಭೂತಳಾದವಳಾಗಿ ಮಳೆಯನ್ನು ಸುರಿಸುವಂತೆ ಆಸೆಯನ್ನು ಹೆಚ್ಚಿಸುತ್ತಿದ್ದೀಯೇ ಆದ್ದರಿಂದ ಸ್ವರ್ಗಸ್ಥಾನೀಯನಾದ ದಾತೃವಾದ ನಾನು ವೃಷ್ಟಿ ಸ್ವರೂಪಳಾದ ನಿನ್ನನ್ನು ಕೊಡುವೆ. ಪೃಥಿವೀ ಸ್ಥಾನೀಯಳಾದ ನಿನ್ನನ್ನು ಪ್ರತಿಗ್ರಹೀತೃವು ತೆಗೆದುಕೊಳ್ಳಲಿ. ಈ ವಿಚಾರವು ದಾತೃಪ್ರತಿಗ್ರಹೀತೃಗಳ ವ್ಯವಹಾರವು.

ಅಥ ಪುರೋಧಾ ದಾತೃವರೌ ಪಶ್ಯ್ನ್ ''ಋತಸ್ಯಹಿ ಶುರುಧಸ್ಸಂತಿ ಪೂರ್ವೀಃ'' ಇತಿತಿಸೊ ೯ ಜಪಿತ್ವಾ— ಮಂತ್ರಾರ್ಥ-

ಋತಸ್ಯ ಹಿ ಶುರುಧ ಸ್ಸಂತಿ ಪೂರ್ವೀ ಋತಸ್ಯ ಧೀತಿ ರ್ವೃಜಿ ನಾನಿಹಂತಿ।

ಋತಸ್ಯ ಶ್ಲೋಕೋ ಬಧಿರಾ ತತರ್ದ ಕರ್ಣಾ ಬುಧಾನ ಶ್ಶುಚಮಾನ

ಆಯೋಃ ॥೧॥

ಋತಸ್ಯ ದೃಳ್ಹಾ ಧರುಣಾನಿ ಸಂತಿ ಪುರೀಣೀ ಚಂದ್ರಾ ವಪುಷೇ ವಪೂಂಷಿ।

ಋತೇನ ದೀರ್ಘಮಿಷಣಂತ ಪೃಕ್ಷ ಋತೇನ ಗಾವ ಋತಮಾವಿವೇಶುಃ ॥೨॥

ಋತಂ ಯೇ ಮಾನ ಋತಮಿದ್ವನೋತ್ಯೃತಸ್ಯ ಶುಷ್ಮಸ್ತುರಯಾಉ ಗವ್ಯುಃ

ಋತಾಯ ಪೃಥ್ವೀ ಬಹುಲೇ ಗಭೀರೆ ಋತಾಯ ಧೇನೂ ಪರಮೇ

ದುಹಾತೇ ॥೩॥

ಈ ಮಂತ್ರಗಳಲ್ಲಿ ಋತನೆಂಬುವನೇ ದೇವತೆಯು ಋತನೆಂ ರೆ ಇಂದ್ರ ಆದಿತ್ಯ ಸತ್ಯ ಯಜ್ಞ ಯಾರಾದರೂ ಆಗಬಹುದು.

1) ಋತ ದೇವನಿಗೆ ಸಂಬಂಧಿಗಳಾದ ಉದಕಗಳು ಬಹುವಿಧವಾಗಿವೆ ಯೆಂದು ಪ್ರಸಿದ್ಧವಾಗಿದೆ. ಋತದೇವನನ್ನುದ್ದೇಶಿಸಿದ ಸ್ತುತಿಯು ಪಾಪವನ್ನು ಹೋಗಲಾಡಿಸುತ್ತದೆ. ಋತದೇವನನ್ನುದ್ದೇಶಿಸಿದುದೂ ಪ್ರಜ್ಞಾಪೂರಿತ ವಾದುದೂ ಪ್ರಕಾಶಮಾನವಾದುದೂ ಆದ ಸ್ತುತಿಯು ಮಾನವನ ಕಿವಿಡಾದ ಕಿವಿಗಳನ್ನು ತೆರೆದು ಅವುಗಳಿಗೆ ಶ್ರವಣಶಕ್ತಿಯನ್ನು ಕೊಡುತ್ತದೆ.

2) ಉತ್ತಮವಾದ ರೂಪವುಳ್ಳ ಋತದೇವನ ದೃಢವಾದುವೂ ಲೋಕವನ್ನು ಧರಿಸುವ ಶಕ್ತಿಯುಳ್ಳವೂ ಆದ ರೂಪಗಳು ಬಹುಪ್ರಕಾರವಾಗಿಯೂ ಆಹ್ಲಾದ ಕರವಾಗಿಯೂ ಇವೆ. ಋತದೇವನ ಸಹಾಯದಿಂದಲೇ ಧೇನುಗಳು ಯಜ್ಞ ವನ್ನು ಪ್ರವೇಶಿಸುತ್ತವೆ.

3) ಸ್ತೋತೃವು ಋತದೇವನನ್ನು ತನ್ನ ಸ್ತುತಿಯಿಂದ ವಶಪಡಿಸಿಕೊಂಡು ಅವನನ್ನೇ ಸೇವಿಸುತ್ತಾನೆ. ಋತದೇವನ ಬಲವು ವೇಗವಾಗಿ ಬೆಳೆಯತಕ್ಕದ್ದೂ ಮತ್ತು ಉದಕಗಳನ್ನು ಅಪೇಕ್ಷಿಸತಕ್ಕದ್ದೂ ಆಗಿದೆ. ವಿಸ್ತೃತವಾದುವೂ ಅತ್ಯಗಾಧವಾದುವೂ ಆದ ದ್ಯಾವಾಪೃಥಿವಿಗಳಿಗೂ ಋತದೇವನ ಕಾರ್ಯಕ್ಕೆ ಸಹಾಯ ಮಾಡಲು ಸಿದ್ಧವಾಗಿವೆ. ಜಗತ್ತಿಗೆ ತೃಪ್ತಿಕಾರಕಗಳಾದುವೂ ಉತ್ಕೃಷ್ಟವಾದುವೂ ಆದ ದ್ಯಾವಾಪೃಥಿವಿಗಳು ಋತದೇವನನ್ನು ಉದ್ದೇಶಿಸಿಯೇ ವೃಷ್ಟಿರೂಪವಾದ ಉದಕಗಳನ್ನು ಕರೆಯುತ್ತವೆ.

## ಅನುದಾನಗಳು

ಅಥ ಧಾತಾ ಕನ್ಯಾದಾನಾಂಗ ಮನುದಾನಾನಿ ಕರಿಷ್ಯೇ.
ಎಂದರೆ ಕನ್ಯಾದಾನಾಂಗವಾಗಿ ಬೇರೆ ಯಥಾಶಕ್ತಿ ದಾನಗಳನ್ನು ಮಾಡುತ್ತೇನೆಂದು ಕನ್ಯಾದಾತನು ಸಂಕಲ್ಪಿಸಿ ಅನುದಾನಗಳನ್ನು ಮಾಡುತ್ತಾನೆ.

(1) ಗೋದಾನ (2) ಭೂದಾನ (3) ಹಿರಣ್ಯದಾನ (4) ಶಯ್ಯಾದಾನ (5) ಭಂಗಾರದ ಉಂಗುರ (6) ಭಂಗಾರದಕುಂಡಲಗಳು (7) ಕಂಚಿನಪಾತ್ರೆ (8) ತಾಮ್ರಪಾತ್ರೆ (9) ಗೃಹದಾನ (10) ಸಾಲಿಗ್ರಾಮ.

(ಈ ಹತ್ತು ದಾನಗಳನ್ನು ಕೊಡಬೇಕೆಂದು ಶಾಸ್ತ್ರದಲ್ಲಿ ಹೇಳಿದೆ. ಇವುಗಳಲ್ಲಿ ಎಷ್ಟು ಸಾಧ್ಯವೋ ಅಷ್ಟನ್ನು ಮಾಡಬಹುದು.)

## ಅಕ್ಷತಾರೋಪಣೆ

"ಅಥ ವಧೂವರೌ ಆಯುರ್ವರ್ಧನ ಕರಂ ಅಕ್ಷತಾ ರೋಪಣಂ ಕುರ್ಯಾತಾಂ॥"
ಅನಂತರದಲ್ಲಿ ವಧೂವರರು ಆಯುಸ್ಸನ್ನು ವೃದ್ಧಿಪಡಿಸುವ ಅಕ್ಷತಾರೋಪಣೆಯನ್ನು ಮಾಡುತ್ತಾರೆ.

ತೈಜಸೇನ ಪಾತ್ರೇಣ ಕ್ಷೀರ ಪಾನೀಯ ಘೃತಮಾಸಿಚ್ಯ ಪಾತ್ರಾಂತರೇಣ ಆರ್ದ್ರಾಕ್ಷತ ಶುದ್ಧ ತಂಡುಲಾನಾದಾಯ ವರಃ ಪ್ರಕ್ಷಾಳಿತ ಪಾಣಿಃ ಪ್ರಕ್ಷಾಳಿತ ವಧ್ವಂಜಲೌ ಕ್ಷೀರಘೃತಂ ಪಾಣಿನಾ ದ್ವಿರಂಪಸ್ತೀರ್ಯ ದ್ವಿವಾರಂ

ತೇನೈನಾಭಿಘಾರಯೇತ್ । ಏವಂ ವರಾಂಜಲಾವನ್ನೇನಾ ಪೂರಿತೇ ದಾತಾ ತದಂಜಲ್ಯೋಃ ಸ್ವುವರ್ಣಂ ನಿಧಾಯ ವರಾಂಜಲಿಂ ಕನ್ಯಾಂಜಲ್ಯುಪರಿ ನಿಧಾಯ "ಕನ್ಯಾ ತಾರಯತು ದಕ್ಷಿಣಾಃ ಪಾಂತು ಬಹುಧೇಯಂ ಚಾಸ್ತು ಪುಣ್ಯಂ ವರ್ಧತಾಂ ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ತಿಥಿಕರಣ ಮುಹೂರ್ತ ನಕ್ಷತ್ರ ಲಗ್ನ ಸಂಪದಸ್ತು" ಇತ್ಯುಚ್ಚಾರ್ಯ ಕನ್ಯಾಮುದ್ಧೃತ್ಯ ಕನ್ಯಾಂಜಲಿ ಸ್ಥಿತಾ ನಕ್ಷತಾ ವರ ಮೂರ್ಧ್ನ್ಯಾರೋಪಯೇತ್ । ತತೋ ವರಃ ಸ್ವಾಂಜಲಿ ಸ್ಥಿತಾ ನಕ್ಷತಾನ್ ಕನ್ಯಾ ಶಿರಸಿ ನಿಕ್ಷಿಪೇತ್। ಏವಂ ದ್ವಿವಾರಂ ಕುರ್ಯಾತ್। ತತಃ ಕನ್ಯಾ ವರಾಂಜಲಿಂ ದ್ವಿರುಪಸ್ತೀರ್ಯ ದ್ವಿಸ್ತಂಡುಲೈರಾಪೂರ್ಯ ದ್ವಿರಭಿಘಾರ್ಯ ಸ್ವಾಂಜಲಿ ಮನ್ನೇನ ಪೂರಯೇತ್। ದಾತಾ ಹಿರಣ್ಯಂ ಪೂರ್ವವನ್ನಿಧಾಯ ಕನ್ಯಾಂಜಲಿಂ ವರಾಂಜಲ್ಯುಪರಿ ನಿಧಾಯ ಕನ್ಯಾ ತಾರಯತು ಇತ್ಯಾದಿ ಪೂರ್ವವದುಕ್ತ್ವಾ ವರೇಣ ಕನ್ಯಾ ಮೂರ್ದನಿ ಅಕ್ಷತೇಷು ಪ್ರಕ್ಷಿಪ್ತೇಷು ಸ್ವಯಂ ಕನ್ಯಾ ಮುದ್ಧೃತ್ಯ ವರಮೂರ್ಧನ್ಯಕ್ಷತಾನಾರೋಪಯೇತ್। ಅಥ ವರಃ ವಧ್ವಂಜಲಿಂ ಪೂರ್ವವದಾ ಪೂರ್ಯ ಸ್ವಾಂಜಲಿ ಮನ್ನೇನ ಪೂರಯೇತ್ ।

ಬೆಳ್ಳಿಯ ಪಾತ್ರೆಯಲ್ಲಿ ಹಾಲನ್ನು ತಂದು ಅದಕ್ಕೆ ಸ್ವಲ್ಪ ತುಪ್ಪವನ್ನು ಹಾಕಿ ವಧುವಿನ ಕೈಯಿಂದ ವರನಕೈಗೆ ಹೂವಿನಿಂದ ಕ್ಷೀರಘೃತವನ್ನು ಲೇಪ ಮಾಡಿ ಎರಡಾವರ್ತಿ ಒಂದೊಂದು ಮುಷ್ಟಿಯಷ್ಟು ತೊಳೆದಕ್ಕಿಯನ್ನಿಟ್ಟು ಪುನಃ ಕ್ಷೀರಘೃತದಿಂದ ಪ್ರೋಕ್ಷಿಸಬೇಕು. ಇದೇ ರೀತಿ ವರನೂ ಕೈತೊಳೆದ ನಂತರ ಕ್ಷೀರ ಘೃತದಿಂದ ಅಭಿಘಾರ ಮಾಡಿಸಿಕೊಂಡು ತೊಳೆದಕ್ಕಿಯನ್ನು ಎರಡಾವರ್ತಿ ಇಡಿಸಿಕೊಂಡು ಪುನಃ ಅಭಿಘಾರ ಮಾಡಿಸಿ ಕನ್ಯೆಯ ಕೈ ಬೊಗಸೆಯ ಮೇಲೆ ತನ್ನ ಬೊಗಸೆಯನ್ನಿಟ್ಟು (ಅಂಜಲಿ) ಅದರಲ್ಲಿ ದಕ್ಷಿಣೆ ಇಟ್ಟು "ಕನ್ಯೆಯು ಪಿತೃ ಕುಲದಿಂದ ದಾಟಲಿ ಧನವು ಪ್ರಾಪ್ತಿಯಾಗಲಿ. ಈ ಕನ್ಯೆಯು ಅನೇಕ ಪ್ರಕಾರವಾಗಿರಲಿ ಅಂದರೆ ದಾತಳಾಗಿರಲಿ. ಪುಣ್ಯವು ಹೆಚ್ಚಲಿ, ಶಾಂತಿ ಪುಷ್ಟಿ ತುಷ್ಟಿಗಳಾಗಲಿ ತಿಥಿ ಕರಣ ಮುಹೂರ್ತ ನಕ್ಷತ್ರ ಲಗ್ನಗಳ ಸಂಪತ್ತುಂಟಾಗಲಿ ಎಂದು ಹೇಳಿ ಕನ್ಯೆಯ ಕೈಯಿನ ಅಕ್ಷತೆಯನ್ನು

ವರನ ತಲೆಯ ಮೇಲೆ "ಯಶೋಮೇ ಕಾಮಃ ಸಮೃಧ್ಯತಾಂ" ಎಂದು ಹಾಕು ತ್ತಾಳೆ. ವರನೂ ಸಹ ತಂಡುಲವನ್ನು ಹಾಕುತ್ತಾನೆ. ಈ ರೀತಿ ಇನ್ನೆರಡು ಸಲ ಎಂದರೆ ಒಟ್ಟು ಮೂರಾವರ್ತಿ ಮಾಡಬೇಕು. ವಧೂ-ವರರಿಬ್ಬರೂ ಪರಸ್ಪರ ಅಕ್ಷತೆಯನ್ನು ಹಾಕುವಾಗ "ಪ್ರಜಾಯೈ ಕಾಮಃ ಸಮೃಧ್ಯತಾಂ" ಎಂದು ವಧುವೂ "ಪಶವೋಮೇ ಕಾಮಃ ಸಮೃಧ್ಯತಾಂ ಎಂದು ವರನೂ "ಯಜ್ಞೋ ಮೇ ಕಾಮಃ ಸಮೃಧ್ಯತಾಂ" ಎಂದು ವಧುವೂ ಮತ್ತೆ "ಶ್ರಿಯೋ ಮೇ ಕಾಮಃ ಸಮೃಧ್ಯತಾಂ" ಎಂದು ವರನೂ ಕೊನೆಯದಾಗಿ ವಧುವು "ಧರ್ಮೋ ಮೇ ಕಾಮಃ ಸಮೃಧ್ಯತಾಂ" ಎಂದು ಹೇಳುತ್ತಾ ಅಕ್ಷತಾರೋಪಣೆಯನ್ನು ಮಾಡಿಕೊಳ್ಳುತ್ತಾರೆ.

ಮಂತ್ರಾರ್ಥಗಳು :

1. ಯಶೋ ಮೇ ಕಾಮಃ ಸಮೃಧ್ಯತಾಂ = ನನ್ನ ಕೀರ್ತಿಯೆಂಬ ಆಸೆಯು ಹಚ್ಚಲಿ.
2. ಭಗೋ ಮೇ = ತಾಂ = ನನ್ನ ಐಶ್ವರ್ಯ ಪರಾಕ್ರಮಾದಿಗಳೆಂಬ ಆಸೆಯು ಹೆಚ್ಚಲಿ.
3. ಪ್ರಜಾಯೈ ಕಾಮಃ = ತಾಂ = ಸಂತಾನವೆಂಬ ಆಸೆಯು ಹೆಚ್ಚಲಿ.
4. ಪಶವೋಮೇ = ತಾಂ = ಚತುಷ್ಪಾದ ಪ್ರಾಣಿಗಳ ಅಭಿವೃದ್ಧಿಯಾಗಲಿ.
5. ಯಜ್ಞೋ = ತಾಂ = ಯಜ್ಞಯಾಗಾದಿ ಕರ್ಮಗಳಲ್ಲಿ ಆಸೆಯು ವೃದ್ಧಿಯಾಗಲಿ
6. ಶ್ರಿಯೋ = ತಾಂ = ಸಂಪತ್ತೆಂಬ ಇಷ್ಟಾರ್ಥವು ವೃದ್ಧಿಯಾಗಲಿ.
7. ಧರ್ಮೋ = ತಾಂ = ಧರ್ಮವನ್ನು ಮಾಡುವುದರಲ್ಲಿ ನನ್ನ ಆಸೆಯು ಹೆಚ್ಚಲಿ.

"ಅಥ ವಧೂವರೌ ಯಥೇಷ್ಟಂ ನಿಕ್ಷಿಪೇಯಾತಾಂ"

ಏಳಾವರ್ತಿ ವಧೂವರರು ಪರಸ್ಪರ ಅಕ್ಷತಾರೋಪಣೆಯನ್ನು ಮಾಡಿಕೊಂಡ ಮೇಲೆ ಉಳಿದ್ದನ್ನೆಲ್ಲಾ ಪರಸ್ಪರ ಹಾಕಿ ಮುಗಿಸುವರು.

**ಮಾಲ್ಯಾತಿಲೋಕಣ :** ಅಥ ವರಃ ಸ್ವಶೇಖರ ಪುಷ್ಪದಳ ಮಾದಾಯ ಕ್ಷೀರ ಘೃತೇನಾಪ್ಲಾವ್ಯ ಕನ್ಯಾ ಲಲಾಟೇ ತಿಲಕಂ ಕುರ್ಯಾತ್ । ಸಾಽಪಿಸ್ವ ಶೇಖರ ಪುಷ್ಪದಳೇನ ವರಲಲಾಟೇ ತಿಲಕಂ ಕೃತ್ವಾ ಪುಷ್ಪಮಾಲಾಂ ವರಸ್ಯ ಕಂಠೇ ನಿದಧ್ಯಾತ್ । ವರೋಽಪಿ ಕನ್ಯಾಕಂಠೇ ಪುಷ್ಪಮಾಲಾಂ ನಿದಧ್ಯಾತ್ ॥

ವರನು ತನ್ನ ತಲೆಯಲ್ಲಿನ ಒಂದು ಪುಷ್ಪವನ್ನು ತೆಗೆದು ಕ್ಷೀರಘೃತದಲ್ಲದ್ದಿ ಕನ್ಯೆಯ ಹಣೆಗೆ ತಿಲಕವನ್ನಿಡಬೇಕು. ಆ ಕನ್ಯೆಯೂ ಕೂಡ ತನ್ನ ತಲೆಯ ಒಂದು ಪುಷ್ಪದಳದಿಂದ ವರನ ಹಣೆಗೆ ತಿಲಕವನ್ನಿಟ್ಟು ವರನ ಕೊರಳಿಗೆ ಪುಷ್ ಮಾಲೆಯನ್ನು ಹಾಕುತ್ತಾಳೆ. ವರನೂ ಕೂಡ ಕನ್ಯೆಯ ಕೊರಳಿಗೆ ಪುಷ್ಪ ಮಾಲೆಯನ್ನು ಹಾಕುತ್ತಾನೆ.

**ಕಂಕಣ ಸೂತ್ರ :** ಅಥ ಬ್ರಾಹ್ಮಣಾಃವಧೂವರಯೋಃ ಚತುರ್ದಿಕ್ಷು ಸ್ಥಿತ್ವಾ ದುಗ್ಧಾಕ್ತೇನದ್ವಿಗುಣ ಶುಕ್ಲಸೂತ್ರೇಣ ದಂಪತ್ಯೋಃ ಕಂಠದೇಶೇ ಪ್ರಾಗುದೀಚೀಮಾರಭ್ಯಪ್ರದಕ್ಷಿಣಾವೃತೇನ"ಪರಿತ್ವಾಗಿರ್ವಣಃ ಇತಿ ಮಂತ್ರೇಣ

ವೇದಾಧ್ಯಯನವನ್ನು ಮಾಡಿದ ಬ್ರಾಹ್ಮಣರು ವಧೂವರರ ಸುತ್ತ ನಾಲ್ಕುದಿಕ್ಕುಗಳಲ್ಲಿಯೂ ಕುಳಿತುಕೊಂಡು ಹಾಲಿನಲ್ಲಿ ನೆನೆಸಿದ ಎರಡೆಳೆಯ ಬಿಳಿದಾರದಿಂದ ವಧೂವರರ ಕಂಠಪ್ರದೇಶಕ್ಕೆ ಬರುವಂತ ಈಶಾನ್ಯ ದಿಕ್ಕಿನಿಂದ ಪ್ರಾರಂಭಿಸಿ ಪ್ರ[illegible]ಣಾಕಾರವಾಗಿ ಮುಂದೆಹೇಳುವ ವೇದ ಮತ್ತುಬ್ರಾಹ್ಮಣ ಮಂತ್ರಗಳಿಂದ ಕ[illegible]ಣವನ್ನು ಸುತ್ತುವರು

**ಮಂತ್ರಗಳು**

ಪರಿತ್ವಾ ಗಿರ್ವಣೋ ಗಿರ ಇಮಾ ಭವಂತು ವಿಶ್ವತಃ

ವೃದ್ಧಾಯು ಮನು ವೃದ್ಧಯೋ ಜುಷ್ಟಾಭವಂತು ಜುಷ್ಟಯಃ॥

ದಶಾವನಿಭ್ಯೋ ದಶಕಕ್ಷ್ಯೇಭ್ಯೋ ದಶಯೋಕ್ತ್ರೇಭ್ಯೋ ದಶಯೋಜನೇಭ್ಯಃ |

ದಶಾಭೀಶುಭ್ಯೋ ಅರ್ಚತಾಜರೇಭ್ಯೋ ದಶಧುರೋ ದಶಯುಕ್ತಾ ವಹದ್ಭ್ಯಃ ||

ತೇ ಅದ್ರಯೋ ದಶಯಂತ್ರಾಸ ಆಶವಸ್ತೇಷಾ ಮಾಧಾನಂ ಪರ್ಯೇತಿ

ಹರ್ಯತಂ | ತ ಊಸುತಸ್ಯ ಸೋಮ್ಯಸ್ಯಾಂಧಸೋಂಶವಃ ಪೀಯೂಷಂ

ಪ್ರಥಮಸ್ಯ ಭೇಜಿರೇ ||

ತೇ ಸೋಮಾದೋ ಹರೀ ಇಂದ್ರಸ್ಯ ನಿಂಸತೇಽಂಶುಂ ದುಹಂತೋ ಅಧ್ಯಾಸತೇ

ಗವಿ | ತೇಭಿರ್ದುಗ್ಧಂ ಪಪಿವಾನ್ತ್ಸೋಮ್ಯಂ ಮಧ್ವಿಂದ್ರೋ ವರ್ಧತೇ

ಪ್ರಥತೇ ವೃಷಾಯತೇ || ವೃಷಾವೋ ಅಂಶುರ್ನ ಕಿಲಾರಿಷಾಥ ನೇಳಾವಂತ-

ಸ್ಸದಮಿತ್ಸ್ಥನಾಶಿತಾಃ | ರೈವತ್ಯೇವ ಮಹಸಾ ಚಾರವಸ್ಥನ ಯಸ್ಯ

ಗ್ರಾವಾಣೋ ಅಜುಷಧ್ವಮಧ್ವರಂ || ೧ ||

ತ್ವದಿಲಾ ಅತ್ವದಿಲಾಸೋ ಅದ್ರಯೋಽಶ್ರಮಣಾ ಅಶ್ಲಥಿತಾ

ಅಮೃತ್ಯವಃ | ಅನಾತುರಾ ಅಜರಾಃ ಸ್ಥಾಮ ವಿಷ್ಣವಃ ಸುಪೀವಸೋ

ಅತೃಷಿತಾ ಅತೃಷ್ಣಜಃ || ಧ್ರುವಾ ಏವ ವಃ ಪಿತರೋ ಯುಗೇಯುಗೇ

ಕ್ಷೇಮಕಾಮಾಸ ಸ್ಸದಸೋ ನ ಯುಂಜತೇ | ಅಜುರ್ಯಾಸೋ ಹರಿಷಾಚೋ

ಹರಿದ್ರವ ಆ ದ್ಯಾಂ ರವೇಣ ಪೃಥಿವೀಮಶುಶ್ರವುಃ || ತದಿದ್ವದಂತ್ಯದ್ರಯೋ

ವಿಮೋಚನೇ ಯಾಮನ್ನಂಜಸ್ಪಾ ಇವಘೇದುಪಬ್ದಿಭಿಃ | ವಪಂತೋ

ಬೀಜಮಿವ ಧಾನ್ಯಾಕೃತಃ ಪೃಂಚಂತಿ ಸೋಮಂ ನ ಮಿನಂತಿ ಬಪ್ಸತಃ | ಸುತೇ

ಅಧ್ವರೇ ಅಧಿ ವಾಚಮಕ್ರತಾ ಕ್ರೀಳಯೋ ನ ಮಾತರಂ ತುದಂತಃ | ವಿಷೂ

ಮುಂಚಾ ಸುಷುವುಷೋ ಮನೀಷಾಂ ವಿವರ್ತಂತಾಮದ್ರಯ

ಶ್ಚಾಯಮಾನಾಃ || ೬ ||

**ಐತರೇಯ ಬ್ರಾಹ್ಮಣ :**

ಋಕ್ಚ ವಾ ಇದಮಗ್ರೇ ಸಾಮ ಚಾಸ್ತಾಂ ಸೈವ ನಾಮ ಋಗಾ-
ಸೀದಮೋ ನಾಮ ಸಾಮ ಸಾವಾ ಋಕ್ಸಾಮೋಪಾವದನ್ಮಿಥುನಂ ಸಂಭವಾವ
ಪ್ರಜಾತ್ಯಾ ಇತಿ | ನೇತ್ಯಬ್ರವೀತ್ಸಾಮ ಜ್ಯಾಯಾ ನ್ವಾ ಅತೋ ಮಮ-
ಮಹಿಮೇತಿ ತೇದ್ವೇ ಭೂತ್ವೋ ಪಾವದತಾಂ ತೇನ ಪ್ರತಿಚನ ಸಮವದತ
ತಾಸ್ತಿಸ್ರೋ ಭೂತ್ವೋಪಾವದಂ ಸ್ತತ್ತಿಸೃಭಿಸ್ಸಮಭವದ್ಯತ್ತಿಸೃಭಿಸ್ಸಮ
ಭವತ್ತಸ್ಮಾತ್ತಿಸೃಭಿಃಸ್ತುವಂತಿ ತಿಸೃಭಿರುದ್ಗಾಯಂತಿ ತಿಸೃಭಿರ್ಹಿ ಸಾಮಸಮ್ಮಿತಂ
ತಸ್ಮಾದೇಕಸ್ಯ ಬಹ್ವ್ಯೋ ಜಾಯಾ ಭವಂತಿ ನೈಕಸ್ಯೈ ಬಹವಸ್ಸಹ ಪತಯೋ
ಯದ್ವೈತತ್ಸಾಚಾಮಶ್ಚ ಸಮಭವತಾಂ ತತ್ಸಾಮಾಭವತ್ತತ್ಸಾಮ್ನಸ್ಸಾಮತ್ವಂ
ಸಾಮನ್ಭವತಿ ಯ ಏವಂ ವೇದ| ಯೋವೈ ಭವತಿ ಯಃ ಶ್ರೇಷ್ಠತಾಮಶ್ನುತೇ
ಸ ಸಾಮರ್ಭವತ್ಯಸಾಮನ್ಯ ಇತಿಹಿ ನಿಂದಂತಿ ತೇ ವೈ ಪಂಚಾನ್ಯದ್ಭೂತ್ವಾ
ಪಂಚಾನ್ಯದ್ಭೂತ್ವಾ ಕಲ್ಪೇತಾಮಾಹಾವಶ್ಚ ಹಿಂಕಾರಶ್ಚ ಪ್ರಸ್ತಾವಶ್ಚ ಪ್ರಥಮಾ
ಚ ಋಗುದ್ಗೀಥಶ್ಚ ಮಧ್ಯಮಾ ಚ ಪ್ರತಿಹಾರ ಶ್ಚೋತ್ತಮಾ ಚ ನಿಧನಂ ಚ
ವಷಟ್ಕಾರಶ್ಚ ತೇ ಯತ್ಪಂಚಾನ್ಯದ್ಭೂತ್ವಾ ಕಲ್ಪೇತಾಂ ತಸ್ಮಾದಾಹುಃ
ಪಾಂಕ್ತೋಯಜ್ಞಃ ಪಾಂಕ್ತಾಃಪಶವ ಇತಿ | ಯದು ವಿರಾಜಂದಶಿನೀ
ಮಭಿಸಮಪದ್ಯೇತಾಂ ತಸ್ಮಾದಾಹುರ್ವಿರಾಜಿ ಯಜ್ಞೋದಶಿನ್ಯಾಂ ಪ್ರತಿಷ್ಠಿತ
ಇತ್ಯಾತ್ಮಾ ವೈಸ್ತೋತ್ರಿಯಃ ಪ್ರಜಾಽನುರೂಪಃ ಪತ್ನೀ ಧಾಯ್ಯಾ ಪಶವಃ
ಪ್ರಗಾಥೋ ಗೃಹಾಸ್ಸೂಕ್ತಂ ಸ ವಾ ಅಸ್ಮಿಂಶ್ಚ ಲೋಕೇಽಮುಷ್ಮಿಂಶ್ಚ
ಪ್ರಜಯಾ ಚ ಪಶುಭಿಶ್ಚ ಗೃಹೇಷು ವಸತಿ ಯ ಏವಂ ವೇದ ||

ಈ ಕಂಕಣಗಳೆರಡನ್ನೂ ಸುತ್ತಿದ್ದಾದ ಮೇಲೆ ಎರಡನೇ ಸಲ ಸುತ್ತಿದ ಕಂಕಣವನ್ನು ಕಂಠದ ಮೇಲಿಂದ ತೆಗೆಯಬೇಕು. ಮೊದಲನೇ ಸಲ ಸುತ್ತಿದ ಕಂಕಣವನ್ನು ಕಟಿಪ್ರದೇಶದಿಂದ ಕೆಳಗೇ ತೆಗೆಯಬೇಕು. ಹೀಗೆ ತೆಗೆದ ಸೂತ್ರಗಳನ್ನು ಐದು ಭಾಗ ಸುತ್ತಿಕೊಂಡು ಎರಡಕ್ಕೂ ಕಂಬಳಿದಾರವನ್ನು ಸೇರಿಸಿ ಅರಿಶಿನದ ಕೊನೆಯನ್ನು ಸೇರಿಸಿ ಗಂಟು ಹಾಕಿ ಅರಿಶಿನದಿಂದ ಆ ಎರಡು ಸೂತ್ರಗಳಿಗೂ ಲೇಪ ಮಾಡಬೇಕು.

ನಂತರ ಆ ಸೂತ್ರಗಳ ಜೊತೆಗೆ ಮಾಂಗಲ್ಯವನ್ನೂ ತರಿಸಿ ಅದನೂ ಜೊತೆಯಲ್ಲಿಟ್ಟು ರಕ್ಷಾಬಂಧನ ಮತ್ತು ಮಾಂಗಲ್ಯ ಮಹಾಲಕ್ಷ್ಮಿಯೊಡನೆ ಪೂಜಿಸಿ ಬ್ರಾಹ್ಮಣ ಸುವಾಸಿನಿಯರ ಆಶೀರ್ವಾದವನ್ನು ಪಡೆದು ಮೊದಲು ಆ ಕಂಕಣಗಳಲ್ಲಿ ಒಂದನ್ನು ಮೊದಲು ವಧುವು "ವಿಶ್ವೇತ್ರಾತೇ" ಎಂಬ ಮಂತ್ರವನ್ನು ಬ್ರಾಹ್ಮಣರಿಂದ ಕೇಳುತ್ತಾ ವರನ ಬಲಕೈಗೆ ಕಟ್ಟುತ್ತಾಳೆ. ವರನೂ "ಶ್ರಿಯೇ ಜಾತ" ಎಂಬ ಮಂತ್ರದಿಂದ ವಧುವಿನ ಎಡಕೈಗೆ ಮುಟ್ಟಿಸಿ ಬಲಕೈಗೆ ಕಟ್ಟುತ್ತಾನೆ.

ಈ ಕಂಕಣ ಬಂಧವಾದಮೇಲೆ ಬ್ರಾಹ್ಮಣರು"ಶತಂಜೀವೇತಿ ದ್ವಾಭ್ಯಾಂ ಬೃಹತ್ಸಾಮೇತ್ಯೇಕಯಾ ಯೇ ಯಜ್ಞೇನೇತ್ಯಷ್ಟಾಭಿಃ ತ್ರ್ಯಂಬಕ ಮಿತ್ಯೇಕಯಾ ಚ ಅಕ್ಷತೈಃ ರಕ್ಷಾಂ ಕುರ್ಯುಃ ॥ ಎಂದು ಹೇಳಿರುವುದರಿಂದ ವಧುವನ್ನು ವರನ ದಕ್ಷಿಣಕ್ಕೆ ಕೂಡಿಸಿ ಮೇಲ್ಕಂಡ ಮಂತ್ರಗಳಿಂದ ಆ ಕಂಕಣ ಸೂತ್ರಗಳಿಗೆ ಆಶೀರ್ವದಿಸುವರು.

ಮಂತ್ರ–ಮಂತ್ರಾರ್ಥ: ವಧುವು ವರನಿಗೆ ಕಟ್ಟುವಾಗ ಹೇಳುವ ಮಂತ್ರ

ವಿಶ್ವೇತ್ರಾತೇ ಸವನೇಷು ಪ್ರವಾಚ್ಯಾ ಯಾ ಚಕರ್ಥ ಮಘವನ್ನಿಂದ್ರ ಸುನ್ವತೇ । ಪಾರಾವತಂ ಯತ್ಪುರು ಸಂಭೃತಂ ವಸ್ವಪಾವೃಣೋಶ್ಶರಭಾಯ ಋಷಿ ಬಂಧವೇ ॥

ಧನವಂತನಾದ ಇಂದ್ರನೇ ಯಜ್ಞಗಳಲ್ಲಿ ಸೋಮವನ್ನು ಹಿಂಡಿ ಅರ್ಪಿಸುವ ಯಜಮಾನನಿಗೆ ಯಾವ ಸಹಾಯ ಕರ್ಮವನ್ನು ಮಾಡಿದೆಯೋ ನಿನ್ನ ಸಮಸ್ತವಾದ ಆ ಕರ್ಮಗಳೆಲ್ಲವೂ ಪ್ರಶಂಸಾರ್ಹವೇ ಸರಿ. ಪರಾವನ್ನು ವಧಕನಾದ ಶತ್ರುವಿಗೇ ಸೇರಿದುದೂ ಬಹುಕಾಲ ಶೇಖರಿ

ಸಲ್ಪಟ್ಟುದೂ ಆದ ಯಾವ ಧನವಿದೆಯೋ ಅದನ್ನು ಋಷಿಗಳಿಗೆಲ್ಲಾ ಆಪ್ತ ವಾದ ಶರಭನೆಂಬ ಋಷಿಗೆ ಸೇರುವಂತೆ ಮಾಡಿದೆ.

## ಮಂತ್ರ–ಮಂತ್ರಾರ್ಥ

ಶತಂ ಜೀವ ಶರದೋ ವರ್ಧಮಾನ ಶ್ಶತಂ ಹೇಮಂತಾನ್ ಚ್ಛತಮುವಸಂತಾನ್|

ಶತಮಿಂದ್ರಾಗ್ನೀ ಸವಿತಾ ಬೃಹಸ್ಪತಿಶ್ಶತಾಯುಷಾಹವಿಷೇಮಂ ಪುನರ್ದುಃ||೧||

ಆಹಾರ್ಷಂ ತ್ವಾವಿದಂ ತ್ವಾ ಪುನರಾಗಾಃ ಪುನರ್ನವ|

ಸರ್ವಾಂಗ ಸರ್ವಂತೇ ಚಕ್ಷುಸ್ಸರ್ವ ಮಾಯುಶ್ಚ ತೇ ವಿದಂ || ೨ ||

ಕ್ಷಯರೋಗ ನಿರ್ಮುಕ್ತನಾದ ಪುರುಷನೇ ನೀನು ದಿನೇ ದಿನೇ ಶರೀರಾರೋಗ್ಯವನ್ನು ಪಡೆಯುತ್ತಾ ನೂರು ಶರದೃತುಗಳು ಕಳೆಯುವ ಪರ್ಯಂತ ಅಂದರೆ ನೂರು ವರ್ಷ ಪರ್ಯಂತ ಜೀವಿಸುವಂತಾಗಲಿ. ಹಾಗೆಯೇ ನೂರು ಹಿಮಂತ ಋತುಗಳು ನೂರು ವಸಂತ ಋತುಗಳು ಕಳೆಯುವ ಪರ್ಯಂತ ಜೀವಿಸುವಂತಾಗಲಿ. ಎಂದರೆ ನೂರು ವರ್ಷಗಳ ವರೆಗೆ ಜೀವಿಸು ಮತ್ತು ಇಂದ್ರ, ಅಗ್ನಿ, ಸವಿತೃ ಬೃಹಸ್ಪತಿ ಈ ದೇವತೆಗಳೆಲ್ಲರೂ ನೂರು ವರ್ಷ ಪರ್ಯಂತ ಬದುಕುವಂತೆ ಆಯುಃ ಪ್ರಮಾಣವನ್ನು ಹೆಚ್ಚಿಸುವ ಸಾಮರ್ಥ್ಯ ವುಳ್ಳ ಈ ಹವಿಸ್ಸಿನಿಂದ ತೃಪ್ತರಾಗಿ ರೋಗಗ್ರಸ್ತನಾಗಿ ಅದರಿಂದ ಚೇತರಿಸಿ ಕೊಂಡಿರುವ ಈ ಪುರುಷನು ಪುನಃ ನಮ್ಮ ಮಧ್ಯದಲ್ಲಿ ಜೀವಿಸಿರುವಂತೆ ಅನುಗ್ರಹಿಸಿದರು. ಎಲೈ ವ್ಯಾಧಿಗ್ರಸ್ತ ಪುರುಷನೇ ಮೃತ್ಯುವಿನ ಮುಖದಿಂದ ನಿನ್ನನ್ನು ಬಿಡಿಸಿ ತಂದಿದ್ದೇನೆ. ಆದ್ದರಿಂದ ನೀನು ಪುನಃ ಹುಟ್ಟಿಬಂದಂತಾ

ಯಿತು. ವ್ಯಾಧಿಯಿಂದ ಚೇತರಿಸಿಕೊಂಡ ನೀನು ಹೊಸಬನಾಗಿ ಎಂದರೆ ಆರೋಗ್ಯದಿಂದ ಪುಷ್ಟಿವಂತನಾಗಿ ನಮ್ಮ ಬಳಿಗೆ ಬಾ. ಸರ್ವಾಂಗಗಳಲ್ಲಿಯೂ ನ್ಯೂನತೆಯಿಲ್ಲದೇ ನಿನ್ನ ಆಯುಃ ಪ್ರಮಾಣವು ಪೂರ್ಣವಾಗಿರುವಂತೆ ಮಾಡಿರುತ್ತೇನೆ.

ಯೇ ಯಜ್ಞೇನ ದಕ್ಷಿಣಯಾ ಸಮಕ್ತಾ ಇಂದ್ರಸ್ಯ ಸಖ್ಯಮಮೃತತ್ವಮಾನಶ

ತೇಭ್ಯೋ ಭದ್ರಮಂಗಿರಸೋ ವೋ ಅಸ್ತು ಪ್ರತಿಗೃಭ್ಣೀತ

ಮಾನವಂ ಸುಮೇಧಸಃ ॥ ೧ ॥

ಎಲೈ ಅಂಗಿರಾ ಋಷಿಗಳಿರಾ ಯಜ್ಞಾರ್ಹವಾದ ಹವಿಸ್ಸನ್ನೂ ಋತ್ವಿಜರಿಗೆ ಕೊಡಬೇಕಾದ ದಕ್ಷಿಣೆಯನ್ನೂ ಸಿದ್ಧಪಡಿಸಿಕೊಂಡಿರುವ ನೀವು ಇಂದ್ರನ ಸ್ನೇಹವನ್ನೂ ಮರಣವಿಲ್ಲದಿರುವ ದೇವತ್ವವನ್ನೂ ಸಂಪಾದಿಸಿದ್ದೀರಿ. ಇಂತಹ ಗುಣವಿಶಿಷ್ಟರಾದ ನಿಮಗೆ ಮಂಗಳವುಂಟಾಗಲಿ. ಮೇಧಾವಿಗಳಾದ ನಿಮ್ಮಲ್ಲಿಗೆ ಬಂದಿರುವ ಮನುಪುತ್ರನಾದ ನನ್ನನ್ನು ಸ್ವೀಕರಿಸಿರಿ ಎಂದರೆ ನಾನಾಡುವ ಮಾತನ್ನು ಆದರದಿಂದ ಕೇಳಿರಿ.

ಯ ಉದಾಜನ್ ಪಿತರೋ ಗೋಮಯಂ ವಸ್ವೃತೇ-

ನಾಭಿಂದನ್ ಪರಿವತ್ಸರೇ ವಲಂ ।

ದೀರ್ಘಾಯುತ್ವಮಂಗಿರಸೋ ವೋ ಅಸ್ತು ಸುಮೇಧಸಃ ॥ ೨ ॥

ಎಲೈ ಅಂಗಿರಾ ಋಷಿಗಳಿರಾ ನಮಗೆ ಹಿರಿಯರಾದುದರಿಂದ ನೀವು ಪಿತೃಗಳಂತೆ ಪೂಜ್ಯರಾಗಿದ್ದೀರಿ. ಪಣಿಗಳಿಂದ ಅಪಹೃತವಾದ ಗೋವುಗಳನ್ನು ಅವುಗಳನ್ನು ಬಚ್ಚಿಟ್ಟಿದ್ದ ಪರ್ವತಪ್ರದೇಶದಿಂದ ಹೊರಕ್ಕೆ ತಂದಿದ್ದೀರಿ. ಒಂದು ವರ್ಷದ ವರೆಗೂ ನೀವು ನೆರವೇರಿಸುತ್ತಿದ್ದ ಸತ್ರಯಾಗವನ್ನು ಪೂರ್ಣ ಮಾಡಿದ್ದೀರಿ. ವಲನೆಂಬ ಅಸುರನನ್ನು ನಾಶಮಾಡಿದ್ದೀರಿ. ಇಂತಹ ನಿಮಗೆ ದೀರ್ಘಾಯುಸ್ಸುಂಟಾಗಲಿ. ಮನುಪುತ್ರನಾದ ನನ್ನನ್ನು ಸ್ವೀಕರಿಸಿರಿ.

ಯ ಋತೇನ ಸೂರ್ಯಮಾರೋಹಯರ್ನ್ ದಿವ್ಯ ಪ್ರಥಯರ್ನ್

ಪೃಥಿವೀಂ ಮಾತರಂ ವಿ ।

ಸುಪ್ರಜಾಸ್ತ್ವಮಂಗಿರಸೋ ವೋ ಅಸ್ತು ಸುಮೇಧಸಃ ॥ ೩ ॥

ಸತ್ಯಸ್ವರೂಪರಾದ ನಿಮ್ಮ ಯಜ್ಞಾನುಷ್ಠಾನದ ಮಹಿಮೆಯಿಂದ ನೀವು ಸರ್ವಪ್ರೇರಕನಾದ ಆದಿತ್ಯನನ್ನು ಸ್ವರ್ಗದಲ್ಲಿ ಸ್ಥಾಪಿಸಿದ್ದೀರಿ. ಸರ್ವರಿಗೂ ಮಾತೃಸ್ವರೂಪಿಯಾದ ಈ ಭೂಮಿಯನ್ನು ನಿಮ್ಮ ಯಜ್ಞಾನುಷ್ಠಾನಾದಿ ಸತ್ಕರ್ಮಗಳಿಂದ ಪ್ರಸಿದ್ಧವನ್ನಾಗಿ ಮಾಡಿದ್ದೀರಿ. ಎಲೈ ಮೇಧಾವಿಗಳಾದ ಅಂಗಿರಸರೇ ನಿಮಗೆ ಉತ್ತಮಹಾದ ಪ್ರಜಾಸಂತತಿಯುಂಟಾಗಲಿ. ಮನುಪುತ್ರ ನಾದ ನನ್ನನ್ನು ಸ್ವೀಕರಿಸಿರಿ. ನಾನಾಡುವ ಮಾತನ್ನು ಆದರದಿಂದ ಕೇಳಿರಿ.

ಅಯಂ ನಾಭಾ ವದತಿ ವಲ್ಗು ವೋ ಗೃಹೇ ದೇವಪುತ್ರಾ

ಋಷಯಸ್ತಚ್ಛೃಣೋತನ ।

ಸುಬ್ರಹ್ಮಣ್ಯಮಂಗಿರಸೋ ವೋ ಅಸ್ತು ಸುಮೇಧ ಸಃ ॥ ೪ ।

ಅಗ್ನಿದೇವನ ಪುತ್ರರೂ ಅತೀಂದ್ರಿಯ ವಸ್ತುಜ್ಞಾನಿಗಳೂ ಆದ ಎಲೈ ಅಂಗಿರಸರೇ ಈಗ ನಿಮ್ಮೊಡನೆ ಸಂಭಾಷಿಸುತ್ತಿರುವ ನಾಭಾನೇದಿಷ್ಠನು (ನಾನು) ನಿಮ್ಮ ಯಜ್ಞಗೃಹದಲ್ಲಿ ಕಲ್ಯಾಣಾತ್ಮಕವಾದೊಂದು ಮಾತನ್ನು ಹೇಳುತ್ತಾನೆ. ಆದಕಾರಣ ಕೇಳಿರಿ. ನಿಮಗೆ ಉತ್ತಮವಾದ ಬ್ರಹ್ಮ ವರ್ಚಸ್ಸುಂಟಾಗಲಿ. ಮನುಪುತ್ರನಾದ ನನ್ನನ್ನು ಸ್ವೀಕರಿಸಿ ಎಂದರೆ ನಾನು ಹೇಳುವ ಮಾತನ್ನು ಆದರದಿಂದ ಕೇಳಿರಿ.

ವಿರೂಪಾಸ ಇದೃಷಯಸ್ತ ಇದ್ಗಂಭೀರವೇಪಸಃ ।

ತೇ ಅಂಗಿರಸ ಸ್ಸೂನವಸ್ತೇ ಅಗ್ನೇಃ ಪರಿಜಜ್ಞಿರೇ ॥ ೫ ॥

ವರ್ಣರೂಪ ಆಕಾರಗಳಲ್ಲಿ ಋಷಿಗಳು ನಾನಾ ವಿಧವಾಗಿರುತ್ತಾರೆ. ಈ ಅಂಗಿರಸರು ಗಹನವಾದ ಯಜ್ಞಾನುಷ್ಠಾನ ಕರ್ಮಗಳಲ್ಲಿ ನಿರತರಾಗಿರು ತ್ತಾರೆ. ಈ ಅಂಗಿರಸರು ಅಗ್ನಿಯ ಪುತ್ರರು ಎಂದರೆ ಅಗ್ನಿಗೆ ಪುತ್ರರಾಗಿ ಉತ್ಪನ್ನರಾಗಿದ್ದಾರೆ.

ಯೇ ಅಗ್ನೇಃ ಪರಿಜಜ್ಞಿರೇ ವಿರೂಪಾಸೋ ದಿವಸ್ಪರಿ ।

ನವಗ್ವೋನು ದಶಗ್ವೋ ಅಂಗಿರಸ್ತಮಸ್ಸಚಾ ದೇವೇಷು ಮಹಂತೇ ॥ ೬ ॥

ಯಜ್ಞ ನಿರ್ವಾಹಕರಾದ ಅಂಗಿರಾ ಋಷಿಗಳು (ಅಥವಾ ವಿಶ್ವೇದೇವತೆಗಳು) ಇಂದ್ರನ ಸಹಾಯದಿಂದ ಪಣಿಗಳೆಂಬ ಅಸುರರು ಅಪಹರಿಸಿ ರಹಸ್ಯವಾದ ಪರ್ವತ ಪ್ರದೇಶದಲ್ಲಿ ಬಚ್ಚಿಟ್ಟಿದ್ದ ಗೋವುಗಳ ಮತ್ತು ಅಶ್ವಗಳ ಸಮೂಹ ವನ್ನು ಆ ಪರ್ವತ ಪ್ರದೇಶದಿಂದ ಬಿಡಿಸಿ ಈಚೆಗೆ ಬರುವಂತೆ ಹೊರಡಿಸಿದರು. ಆ ಅಂಗಿರಸರು ನವಗೆ ಉದ್ದವಾದ ಕಿವಿಗಳುಳ್ಳ ಒಂದು ಸಾವಿರ ಗೋವು

ಗಳನ್ನು ಕೊಡುವುದಕ್ಕಾಗಿ ದೇವತೆಗಳನ್ನುದ್ದೇಶಿಸಿ ಹವಿಸ್ಸನ್ನರ್ಪಿಸಿ ಯಜ್ಞ ಸಮಾಪ್ತಿ ಮಾಡಿದರು.

ಇಂದ್ರೇಣ ಯುಜಾ ನಿಸ್ಸೃಜಂತ ವಾಘತೋ ವ್ರಜಂ ಗೋಮಂತಮಶ್ವಿನಂ ।

ಸಹಸ್ರಂ ಮೇ ದದತೋ ಅಷ್ಟಕರ್ಣ್ಯಃ ಶ್ರವೋ ದೇವೇಷ್ವಕ್ರತ ॥ ೭ ॥

ಪ್ರನೂನಂ ಜಾಯತಾಮಯಂ ಮನುಸ್ತೋಕ್ಮೇವ ರೋಹತು ।

ಯ ಸ್ಸಹಸ್ರಂ ಶತಾಶ್ವಂ ಸದ್ಯೋದಾನಾಯ ಮಂಹತೇ ॥ ೮ ॥

ಅನೇಕ ಅಶ್ವಗಳನ್ನೂ ಸಾವಿರಾರು ಗೋವುಗಳನ್ನೂ ಈ ಋಷಿಗೆ ದಾನ ಮಾಡುವಂತೆ ಪ್ರೇರಿಸುವ ಈ ಸಾವರ್ಣಿಯೆಂಬ ಮನುವು ತನ್ನ ಪುತ್ರಾದಿಗಳಿಂದಲೂ ಧನಾದಿಗಳಿಂದಲೂ ಕೂಡಿದವನಾಗಿ ನೀರಿನಲ್ಲಿ ನೆನೆದ ಬೀಜವು ಬೇಗನೆ ಮೊಳಕೆಯಾಗುವಂತೆ ಈಗಲೇ ಇಲ್ಲಿ ಪ್ರಾದುರ್ಭೂತನಾಗಲಿ.

ಒಟ್ಟಿನಲ್ಲಿ ಸೂಕ್ತದ ಅಭಿಪ್ರಾಯವೆಂದರೆ ಕಂಕಣಬದ್ಧರಾದ ವಧೂವರರು ಈ ಮಂತ್ರಾರ್ಥಗಳನ್ನು ತಿಳಿದು ಧನ ಕನಕ ವಸ್ತು ವಾಹನಾದಿಗಳಲ್ಲಿ ಬೆಳಕಾಗಿರಲಿ.

ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ।

ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥

ಪುಣ್ಯಕರ್ಮರೂಪವಾದ ಸುಗಂಧವುಳ್ಳ ಜಗತ್ಸೃಷ್ಟಿಯನ್ನು ವೃದ್ಧಿಪಡಿಸುವ ತ್ರಿಮೂರ್ತಿಗಳಿಗೂ ಪಿತೃವೂ ಆದ ಪರಮೇಶ್ವರನನ್ನು ನಾವು ಪೂಜಿಸುತ್ತೇವೆ. ತನ್ನ ತೊಟ್ಟಿನಿಂದ ಉರ್ವಾರುಕಫಲವು ಕಳಚಿ ಬಿದ್ದು ಹೋಗುವಂತೆ ಮರಣ ಧರ್ಮವುಳ್ಳ ಸಂಸಾರದಿಂದ ನಾವು ಬಿಡುಗಡೆಯನ್ನು ಹೊಂದುವಂತಾಗಲಿ. ಆದರೆ ಮುಕ್ತಿಯಿಂದ ನಾವು ದೂರವಿರುವಂತಾಗಲಿ.

ಋಕ್ಚವಾ ಇದಮಗ್ರೇ ಎಂಬ ಬ್ರಾಹ್ಮಣದ ವಿಚಾರ. ಇದರಲ್ಲಿ ಮುಖ್ಯವಾದ ಭಾಗವನ್ನು ಮಾತ್ರ ಆರಿಸಿದೆ. ಋಙ್ಮಂತ್ರಗಳಿಗೂ ಸಾಮ ಮಂತ್ರಗಳಿಗೂ ಪರಸ್ಪರ ಸಂಬಂಧವಿದ್ದು, ಯಜ್ಞದಲ್ಲಿ ಇವು ಪರಸ್ಪರ ಆಶ್ರಯಭೂತವಾಗಿವೆ. ಋಕ್ ಮತ್ತು ಸಾಮಗಳ ಸಮ್ಮೇಳನ ಸಾಮ ಎಂಬ ಶಬ್ದದಲ್ಲಿ ಅಡಗಿರುವುದನ್ನು ಸ್ಪಷ್ಟಪಡಿಸುವುದಕ್ಕಾಗಿ ಒಂದು ಉಪಾಖ್ಯಾನವಿದೆ. ಸಾಮವೆಂಬ ಶಬ್ದವು ಸಾ+ಅಮ ಎಂಬ ಬೇರೆ ಬೇರೆ ಶಬ್ದಗಳು ಸೇರಿ ಉಂಟಾಗಿದೆ. ಈ ಎರಡು ಶಬ್ದಗಳಲ್ಲಿ ಸಾ ಎಂಬ ಶಬ್ದವು ಋಗ್ವೇದ ಮಂತ್ರವೂ ಅಮ ಎಂಬ ಶಬ್ದವು ಸಾಮದ ಮಂತ್ರವೂ ಆಗಿದ್ದುವು. ಈ ಋಙ್ಮಂತ್ರವು ಸಾಮದೊಡನೆ ಸೇರಿ ಒಂದಾಗಬೇಕೆಂದು ಬಯಸಿ ಸಾಮದ ಹತ್ತಿರ ಹೋಗಿ ನಾವಿಬ್ಬರೂ ಪತಿಪತ್ನಿಯರ ಭಾವವನ್ನು ಹೊಂದೋಣ. ಈ ಸಮ್ಮೇಲನದಿಂದ ಪ್ರಜೋತ್ಪತ್ತಿಗೆ ಸಹಾಯವಾಗುವುದು ಎಂದು ಹೇಳಲು ಸಾಮವು ಋಕ್ಕಿಗಿಂತ ತನ್ನ ಮಹಿಮೆಯೇ ಪ್ರಬಲವೆಂದು ಯೋಚಿಸಿ, ತನ್ನ ಇಷ್ಟಾರ್ಥವನ್ನು ಋಕ್ಕಿಗೆ ತಿಳಿಸಿತು. ಮತ್ತು ನನಗಿಂತ ನಿನ್ನ ಸ್ಥಾನಮಾನವು ಕೆಳ ದರ್ಜೆಯಲ್ಲಿರುವುದೆಂದೂ ಹೇಳಿ ನಿರಾಕರಿಸಿತು. ಅನಂತರ ಈ ಋಕ್ಕು ತಾನೂ ಈ ಸಾಮಕ್ಕೆ ಸಮನಾಗಬೇಕೆಂದು ಯೋಚಿಸಿ, ಒಂದಾದ ಋಕ್ಕನ್ನು ಎರಡು ಋಕ್ಕುಗಳನ್ನಾಗಿ ಪರಿವರ್ತಿಸಿಕೊಂಡು ಸಾಮದ ಬಳಿಗೆ ಹೋಗಿ ಪ್ರಾರ್ಥಿಸಲು ಸಾಮವು ತನ್ನ ಅಂತಸ್ತಿಗೆ ಸಮವಲ್ಲವೆಂದು ನಿರಾಕರಿಸಿತು. ಆಗ ಆ ಋಕ್ಕುಗಳೆರಡೂ ಮೂರಾಗಿ ಪರಿವರ್ತಿಸಿಕೊಂಡು ಮತ್ತೆ ಸಾಮವನ್ನು ಪ್ರಾರ್ಥಿಸಲು ಆಗ ಸಾಮವು ತನಗೆ ಸಮಾನತೆಯನ್ನೂ ಹೊಂದಿರುವ ಮೂರು ಋಕ್ಕುಗಳೊಡನೆ ಸಂಬಂಧವನ್ನು ಮಾಡಿತು. ಯಜ್ಞದಲ್ಲಿ ಸಾಮಕನು ಮೂರು ಮೂರ

ಋಕ್ಕುಗಳಿಂದ ಕೂಡಿದ ಸ್ತೋತ್ರಗಳಿಂದ ಗಾನ ಮಾಡುತ್ತಾನೆ. ಇದರಿಂದ ಒಂದು ಸಾಮ ಮಂತ್ರಕ್ಕೆ ಮೂರು ಋಕ್ಕುಗಳು ಸಮವಾದ್ದರಿಂದ ಸಾಮದ ಮಹಿಮೆಯು ಋಕ್ಕಿನ ಮಹಿಮೆಗಿಂತ ಮೂರರಷ್ಟಿರುವುದು. ಈ ವಿಷಯವನ್ನು ತಿಳಿದ ಮನುಷ್ಯನು ಗೌರವಾನ್ವಿತನಾಗುವನು. ಲೋಕ ವ್ಯವಹಾರದಲ್ಲಿಯೂ ಕೂಡ ಒಬ್ಬ ಪುರುಷನಿಗೆ ಅನೇಕ ಪತ್ನಿಯರಿರುವರು. ಒಬ್ಬ ಸ್ತ್ರೀಗೆ ಅನೇಕ ಪತಿಯರಿರುವುದಿಲ್ಲ. ಅದರಂತೆ ಋಗ್ವೇದವು ಸ್ತ್ರೀಸ್ಥಾನದಲ್ಲಿರುವುದು. ಸಾಮವು ಪುರುಷ ಸ್ಥಾನದಲ್ಲಿರುವುದು. ಆದ್ದರಿಂದ ಪುರುಷ ಸ್ಥಾನದಲ್ಲಿರುವ ಸಾಮ ಮಂತ್ರಕ್ಕೆ ಸ್ತ್ರೀ ಸ್ಥಾನದಲ್ಲಿರುವ ಮೂರು ಋಕ್ಕುಗಳು ಸೇರಿರುವುದು ಯುಕ್ತ ವಾಗಿದೆ. ಪ್ರಕೃತದಲ್ಲಿ ಈ ವಧೂವರರ ದಾಂಪತ್ಯ ಸುಖವೂ ಚೆನ್ನಾಗಿ ಬಾಳಲಿ ಎಂದು ಹಾರೈಸುವ ಭಾಗ್ಯವಿದು.

ವರನು ವಧುವಿಗೆ ಕಟ್ಟುವಾಗ ಹೇಳುವ ಮಂತ್ರ.

ಶ್ರಿಯೇ ಜಾತಃ ಶ್ರಿಯ ಆ ನಿರಿಯಾಯ ಶ್ರಿಯಂ ವಯೋ ಜರಿತೃಭ್ಯೋ

ದಧಾತಿ | ಶ್ರಿಯಂ ವಸಾನಾ ಅಮೃತತ್ವಮಾಯನ್ಭವಂತಿ ಸತ್ಯಾ ಸಮಿಥಾ

ಮಿತದ್ರೌ

ಸೋಮದೇವನು ಸಂಪತ್ತಿಗಾಗಿ ಉತ್ಪನ್ನನಾಗಿದ್ದಾನೆ. ಸಂಪತ್ತಿಗಾಗಿ ಹೊರ ಹೊರಡುತ್ತಾನೆ. ಸ್ತುತಿಕರ್ತರಿಗೆ ಅನ್ನವನ್ನೂ ಸಂಪತ್ತನ್ನೂ ಕೊಡು ತ್ತಾನೆ. ಸೋಮನಿಂದ ದತ್ತವಾದ ಸಂಪತ್ತನ್ನು ಪಡೆದ ಸ್ತುತಿಕರ್ತರು ಮರಣ ರಾಹಿತ್ಯವನ್ನು ಹೊಂದುತ್ತಾರೆ. ಮಿತಗಾಮಿಯಾದ ಸೋಮನ ಸಹಾಯ ವಿರಲಾಗಿ ಸ್ತುತಿಕರ್ತರ ಯುದ್ಧಕರ್ಮಗಳು ಸತ್ಯಾತ್ಮಕವಾದ ಸತ್ಫಲವುಳ್ಳ ದ್ದಾಗಿ ಆಗುತ್ತವೆ.

ಶ್ರಿಯ ಏವೈನಂ ಶಚ್ಛ್ರಿಯಾಮಾದಧಾತಿ ಸಂತತಮೃಚಾ ವಷಟ್ಕೃತ್ಯಂ

ಸಂತತ್ಯೈ ಸಂಧೀಯ ತೇ ಪ್ರಜಾಯಾ ಪಶುಭಿರ್ಯ ಏವಂ ವೇದ ॥

**ಮಾಂಗಲ್ಯ ಧಾರಣೆ :**

ಈ ಕಂಕಣ ಸೂತ್ರವು ಧಾರಣೆಯಾದ ಮೇಲೆ ವರನು ವಧುವಿಗೆ ಮಾಂಗಲ್ಯವನ್ನು ಕಟ್ಟುತ್ತಾನೆ.

ಮಾಂಗಲ್ಯಂ ತಂತುನಾಽನೇನ ಮಮ ಜೀವನ ಹೇತುನಾ ।
ಕಂಠೇ ಬಧ್ನಾಮಿ ಸುಭಗೇ ತ್ವಂ ಜೀವ ಶರದಾಂ ಶತಂ ॥

ನನ್ನ ಬದುಕುವಿಕೆಗೋಸ್ಕರ ಈ ದಾರದಿಂದ ಸೇರಿಸಿದ ಮಾಂಗಲ್ಯವನ್ನು ನಿನ್ನ ಕೊರಳಲ್ಲಿ ಕಟ್ಟುತ್ತೇನೆ. ಎಲೈ ಮಂಗಳೆಯೇ ನೀನು ನೂರು ವರ್ಷ ಸುಖ ವಾಗಿ ಬಾಳು." ಎಂದು ಹೇಳುತ್ತಾ ಮಾಂಗಲ್ಯವನ್ನು ಕಟ್ಟುತ್ತಾನೆ. ಮಾಂಗಲ್ಯಧಾರಣೆಯಾದ ನಂತರ ವಧುವಿಗೆ ತಂದಿರುವ ಆಭರಣಗಳನ್ನೆಲ್ಲಾ ಅಲಂಕರಿಸುತ್ತಾರೆ.

**ಫಲಪೂಜೆ :**

ಆಮೇಲೆ ಕನ್ಯಾದಾತೃಗಳು ವಧೂವರರು ವರಮಾತಾ ಪಿತೃಗಳು ಈ ಆರು ಜನರೂ ಇಷ್ಟದೇವತಾ ಸ್ಮರಣಪೂರ್ವಕವಾಗಿ ಫಲಪೂಜೆಯನ್ನು ಮಾಡು ತ್ತಾರೆ. ಮತ್ತು ಆ ಫಲಗಳನ್ನು ಬ್ರಾಹ್ಮಣರಿಗೆ ದಾನಮಾಡುತ್ತಾರೆ.

ತತಸ್ಸಭಾರ್ಯೋಽ ದಾತಾ ವೃದ್ಧಾಃ ಪುರಂಧ್ರ್ಯೋಽ ಜ್ಞಾತಿಬಾಂಧವಾಶ್ಚ ಕ್ರಮಾದಾಶೀರ್ಭಿಃ ಅದ್ರಾಕ್ಷತಾರೋಽಪಣಂ ಕುರ್ಯುಃ ॥

ಫಲಪೂಜೆಯಾದ ಮೇಲೆ ಗುರುಹಿರಿಯರು ಬಂಧುಬಳಗದವರು

ಸುವಾಸುನಿಯರು ಎಲ್ಲರೂ ಆಶೀರ್ವಾದವನ್ನು ಮಾಡಿ ಅಕ್ಷತೆಯನ್ನು ವಧೂವರರ ತಲೆಯ ಮೇಲೆ ಹಾಕುವರು.

**ನೀರಾಜನ (ಆರತಿ) :**

ಸುವಾಸಿನಿಯರು ಆರತಿಯನ್ನು ಮಾಡಿ ಆಶೀರ್ವದಿಸುವರು. ಮಾಂಗಲ್ಯ ಧಾರಣೆಯಾದ ಮೇಲೆ "ತಯೋರುಸ್ತರೀಯಾಂತಯೋಃ ಪಂಚ ಪಂಚ ಪೂಗಫಲಾನಿ ಸಹಿರಣ್ಯಾನಿ ಪುರೋಧಾ ಬಧ್ನೀಯಾತ್ ವಧೂವರೌ ವಿವಾಹ ವ್ರತ ಸಮಾಪ್ತಿಪರ್ಯಂತಂ ತದ್ಗ್ರಂಥಿದ್ವಯಂ ನ ವಿಸೃಜೇತಾಂ" ವಧೂವರರು ಹೊದ್ದಿರುವ ಸೆರಗಿನಲ್ಲಿ ಐದೈದು ಬಟ್ಟಡಿಕೆ, ದಕ್ಷಿಣೆ ಮತ್ತು ಅಕ್ಷತೆಗಳನ್ನು ಪುರೋಹಿತರು ಕಟ್ಟುತ್ತಾರೆ. ವಿವಾಹ ವ್ರತವು ಮುಗಿಯುವವರೆಗೂ ವಧೂವರರು ಆ ಗಂಟುಗಳನ್ನು ಬಿಚ್ಚಬಾರದು.

**ಬ್ರಾಹ್ಮಣರ ಆಶೀರ್ವಾದ :**

ಈ ಮಂತ್ರಗಳು ನಿರೀಕ್ಷಣ ಕಾಲದಲ್ಲಿ ಪಠಿಸುವ ಸೂರ್ಯಾಸೂಕ್ತದಲ್ಲಿ ಸೇರಿವೆಯಾದ್ದರಿಂದ ಪ್ರತ್ಯೇಕವಾಗಿ ಬರೆದಿಲ್ಲ. ಆದ್ಯಂತಗಳನ್ನು ಮಾತ್ರ ಬರೆದಿದೆ.

ಸೋಮಃ ಪ್ರಥಮೋ...ಜಾಃ: ಎಲೈ ಕನ್ಯೆಯೇ ಸೋಮನು ಮೊದಲು ನಿನ್ನನ್ನು ಪಡೆದನು. ಎರಡನೆಯವನು ಗಂಧರ್ವನು. ಮೂರನೆಯ ಪತಿಯೆಂದರೆ ಅಗ್ನಿಯು. ನಾಲ್ಕನೆಯವನೇ ಮನುಷ್ಯನಾದ ಈ ನಿನ್ನ ಗಂಡನು. ॥ ೧ ॥

ಸೋಮೋದದತ್...ಇಮಾಂ : ಸೋಮನು ಮೊದಲು ಗಂಧರ್ವನಿಗೆ ನಿನ್ನನ್ನು ಕೊಟ್ಟನು. ಆಮೇಲೆ ಗಂಧರ್ವನು ಅಗ್ನಿಗೆ ಕೊಟ್ಟನು. ಅಗ್ನಿಯು ನನಗೆ ಇವಳನ್ನೂ ಇವಳ ಜೊತೆಗೆ ಧನವನ್ನೂ ಮತ್ತು ಪುತ್ರರನ್ನೂ ಕೊಟ್ಟನು ॥ ೨ ॥

ಇಹೈವಸ್ತಂ....ಗೃಹೇ : ಎಲೈ ಕನ್ಯೆಯೇ ನಾವು ಈ ಲೋಕದಲ್ಲೇ ಇರೋಣ. ನಾವು ಬೇರೆಯಾಗದಿರುವಂತಾಗಲಿ. ನಮ್ಮ ಮನೆಯಲ್ಲಿಯೇ

ಪುತ್ರಪೌತ್ರಾದಿಗಳೊಡನೆ ಸಂತೋಷವನ್ನನುಭವಿಸುತ್ತಾ ಪೂರ್ಣವಾದ ಆಯುಸ್ಸನ್ನು ಪಡೆಯೋಣ ॥ ೩ ॥

ಆ ನಃ ಪ್ರಜಾಂ...ಶಂ ಚತುಷ್ಪದೇ:ಪ್ರಜಾಪತಿಯು ನಮಗೆ ಸಂತಾನವನ್ನನು ಗ್ರಹಿಸಲಿನಾವು ವೃದ್ಧಾಪ್ಯದವರೆಗೂ ಜೊತೆಯಲ್ಲಿರಲು ಅರ್ಯಮನು ನಮ್ಮನ್ನು ಅನುಗ್ರಹಿಸಲಿ. ಕೆಡಕನ್ನುಂಟು ಮಾಡುವ ಲಕ್ಷಣಗಳಿಲ್ಲದೇ ನೀನು ಪತಿಗೃಹ ವನ್ನು ಪ್ರವೇಶಿಸು. ನಮ್ಮ ಮನೆಯಲ್ಲಿರುವ ಪುತ್ರಾದಿಗಳಿಗೂ ಪಶ್ವಾದಿ ಗಳಿಗೂ ಮಂಗಳವನ್ನುಂಟು ಮಾಡು ॥ ೪ ॥

ಅಘೋರ ಚಕ್ಷುಃ...ಶಂ ಚತುಷ್ಪದೇ: ಎಲೈ ವಧುವೇ ನೀನು ಕ್ರೂರವಾದ ನೋಟವಿಲ್ಲದೇ ಪತಿಯನ್ನು ಸಮೀಪಿಸು. ಕೆಡುಕನ್ನು ಬಯಸಬೇಡ. ಪಶುಗಳಿಗೆ ಹಿತಕರಳೂ ಸುಮುಖಳೂ ವರ್ಚಸ್ವಿನಿಯೂ ಆಗಿರು. ವೀರಪುತ್ರರನ್ನು ಪಡೆದು ದೇವಪೂಜಾಸಕ್ತಳೂ ಸುಖಕರಳೂ ಆಗಿರು. ॥ ೫ ॥

ಇಮಾಂತ್ವಂ...ಕೃಧಿ : ಕಾಮವರ್ಷಕನಾದ ಇಂದ್ರನೇ ಈ ವಧು ವನ್ನು ಸತ್ಪುತ್ರವಂತಳನ್ನಾಗಿಯೂ ಮಂಗಳಕರಳನ್ನಾಗಿಯೂ ಮಾಡು. ಇವಳಿಗೆ ಹತ್ತು ಮಕ್ಕಳನ್ನು ಕರುಣಿಸು. ಇವಳ ಗಂಡನನ್ನೇ ಹನ್ನೊಂದನೆಯ ಮಗನನ್ನಾಗಿ ಮಾಡು. ॥ 6 ॥

ಸಂರಾಜ್ಞೀ...ದೇವೃಷು : ಎಲೈ ವಧುವೇ ನಿನ್ನ ಮಾವನಲ್ಲಿ ರಾಣಿ ಯಂತೆ ವರ್ತಿಸು. ಅತ್ತೆಯಲ್ಲಿ ಸಂತೋಷಯುಕ್ತಳಾಗಿರುವಂತೆ ವರ್ತಿಸು. ನಾದಿನಿಯರಲ್ಲಿಯೂ ಭಾವ ಮೈದುನರಲ್ಲಿಯೂ ಅವರಿಗೆ ಸಂತೋಷವಾಗುವಂತೆ ಅಧಿಕಾರವನ್ನು ವರ್ತಿಸು ॥ ೭ ॥

ಸಮಂಜಂತು...ದಧಾತುನೌ: ಸಮಸ್ತ ದೇವತೆಗಳೂ ನಮ್ಮಹೃದಯವನ್ನು ಒಂದಾಗುವಂತೆ ಮಾಡಲಿ. ಅಬ್ದೇವತೆಗಳೂ ನಮ್ಮನ್ನು ಒಂದುಗೂಡಿಸಲಿ. ಮಾತರಿಶ್ವನು ನಮ್ಮ ಮನಸ್ಸನ್ನು ಪರಸ್ಪರ ಹಿತಕರವಾಗುವಂತೆ ಮಾಡಲಿ. ಉದಾತ್ತವಾದ ಸರಸ್ವತಿಯೂ ಕೂಡ ನಮ್ಮ ಮನಸ್ಸನ್ನು ಒಟ್ಟುಗೂಡಿಸಲಿ.

ಈ ಎಂಟನೇ ಮಂತ್ರಕ್ಕೆ ಮತ್ತೊಂದು ಅಭಿಪ್ರಾಯವಿದೆ. ಏನೆಂಜರೆ ಎಲ್ಲೈ ಸಮಸ್ತ ದೇವತೆಗಳಿರಾ ನವದಂಪತಿಗಳಾದ ನಮಗೆ ಸಂಭವಿಸುವ ದುಃಖ ಕ್ಲೇಶಾದಿಗಳನ್ನೂ ತೊಂದರೆಗಳನ್ನೂ ಹೋಗಲಾಡಿಸಿ ಲೌಕಿಕವಾದ ಗೃಹ ಕೃತ್ಯಾದಿಗಳಲ್ಲಿಯೂ ವೈದಿಕವಾದ ಯಜ್ಞಯಾಗಾದಿ ಸತ್ಕರ್ಮಾನುಷ್ಠಾನಾದಿ ಗಳಲ್ಲಿಯೂ ನಮ್ಮಿಬ್ಬರ ಮನಸ್ಸೂ ಭಿನ್ನಾಭಿಪ್ರಾಯವಿಲ್ಲದಂತೆ ಒಂದೇ ರೀತಿ ಯಾಗಿ ಪ್ರವರ್ತಿಸುವಂತೆ ಅನುಗ್ರಹಿಸಿರಿ.

**ಲಾಜಹೋಮ ಅಥವಾ ಪಾಣಿಗ್ರಹಣ ಹೋಮ :**

ವಧೂ ಸಮೇತನಾದ ವರನು ಈ ರೀತಿಯಾಗಿ ಸಂಕಲ್ಪಮಾಡುತ್ತಾನೆ.

"ಮಮ ಸಹಧರ್ಮಚಾರಿಣೀ ಸಂಬಂಧ ಸಂಪಾದನೀಯೌಪಾಸನಾಗ್ನಿ ಪರಿಗ್ರಹಣಾರ್ಥಂ ಪಾಣಿಗ್ರಹಣ ಹೋಮಂ ಕರಿಷ್ಯೇ ಎಂದರೆ ನಾನು ಮಾಡುವ ಧರ್ಮಕಾರ್ಯಗಳಿಗೆ ಸಹಾಯಕಳಾದ ಈ ವಧುವಿನ ಸಂಬಂಧದಿಂದ ಸಂಪಾದಿಸಲ್ಪಡುವ ಔಪಾಸನಾಗ್ನಿಯನ್ನು ಸ್ವೀಕರಿಸುವುದಕ್ಕೋಸ್ಕರ ಪಾಣಿ ಗ್ರಹಣ ಹೋಮವನ್ನು ಮಾಡುತ್ತೇನೆ." ಎಂದು ಸಂಕಲ್ಪಿಸುತ್ತಾನೆ.

"ಅಗ್ನ ಆಯೂಂಷಿ ಪವಸೇ" ಇತ್ಯಾದಿ ಮೂರು ಮಂತ್ರಗಳಿಂದಲೂ "ತ್ವಮರ್ಯಮಾಭವಸಿ" ಎಂಬ ಮಂತ್ರದಿಂದಲೂ "ಪ್ರಜಾಪತೇ ನ ತ್ವತ್" ಎಂಬ ಮಂತ್ರದಿಂದಲೂ ಕೂಡ ಆಜ್ಯದ್ರವ್ಯದಿಂದ ಪ್ರಧಾನ ಹೋಮವನ್ನು ಮಾಡುತ್ತಾನೆ.

ಮಂತ್ರ–ಮಂತ್ರಾರ್ಥ :

ಅಗ್ನ ಆಯೂಂಷಿ ಪವಸ ಆಸುವೋರ್ಜಮಿಷಂ ಚ ನಃ ।

ಆರೇ ಬಾಧಸ್ವ ದುಚ್ಛುನಾಂ ಸ್ವಾಹಾ ॥ ೧ ॥

ಎಲೈ ಅಗ್ನಿಯೇ ನಮಗೆ ಬಲವನ್ನೂ ಅನ್ನವನ್ನೂ ಕೊಟ್ಟು ಕಾಪಾಡು. ಮತ್ತು ದುರ್ಭಿಕ್ಷಾದಿಗಳನ್ನು ಹೋಗಲಾಡಿಸು.

ಅಗ್ನಿರ್ಋಷಿಃ ಪವಮಾನಃ ಪಾಂಚಜನ್ಯಃ ಪುರೋಹಿತಃ ।

ತಮೀಮಹೇ ಮಹಾಗಯಂ ಸ್ವಾಹಾ ॥ ೨ ॥

ಮಂತ್ರದ್ರಷ್ಟೃವಾದ ನಿಷಾದ ಪಂಚಮಾದಿ ನಾಲ್ಕು ವರ್ಣಗಳಿಗೂ ಹಿತಕರನಾದ ಪೂರ್ವದಿಕ್ಕಿನಲ್ಲಿ ಆಹವನೀಯವೆಂಬ ಹೆಸರಿನಿಂದ ಇಡಲ್ಪಟ್ಟ ಅಗ್ನಿಯು ಮಹತ್ತಾದ ಧನವನ್ನಾಗಲೀ ದೊಡ್ಡ ಮನೆಯನ್ನಾಗಲೀ ಕೊಡಲೆಂದು ಯಾಚಿಸುತ್ತೇವೆ.

ಅಗ್ನೇ ಪವಸ್ವಸ್ವಪಾ ಅಸ್ಮೇ ವರ್ಚಸ್ಸುವೀರ್ಯಂ ।

ದಧದ್ರಯಿಂ ಮಯಿ ಪೋಷಂ ಸ್ವಾಹಾ ॥ ೩ ॥

ಎಲೈ ಅಗ್ನಿಯೇ ಒಳ್ಳೆಯ ಕೆಲಸವುಳ್ಳ ನೀನು ಒಳ್ಳೆಯ ಶಕ್ತಿಯನ್ನೂ ತೇಜಸ್ಸನ್ನೂ ಪುಷ್ಟಿಯನ್ನೂ ಕೊಡುವುದಲ್ಲದೇ ನಮಗೆ ಧನವನ್ನೂ ಕೊಡು.

ತ್ವಮರ್ಯಮಾ ಭವಸಿಯತ್ಕನೀನಾಂ ನಾಮ ಸ್ವಧಾವನ್ ಗುಹ್ಯಂ ಬಿಭರ್ಷಿ ।

ಅಂಜಂತಿ ಮಿತ್ರಂ ಸುಧಿತಂ ನ ಗೋಭಿರ್ಯದ್ದಂಪತೀ ಸಮನಸಾ ಕೃಣೋಷಿ

ಸ್ವಾಹಾ ॥ ೪ ॥

(ಎಲೈ ಸ್ವಧಾವಗ) ಅಗ್ನಿಯೇ ನೀನು ಯಾವ ಕಾರಣದಿಂದ ನಮಗೆ ಕನ್ಯೆಯರನ್ನು ಕೊಡುವ ದಾತನಾಗಿರುವೆಯೋ ಅದರಿಂದಲೇ ವೈದಿಕರಿಂದಲೂ ತಿಳಿಯದಿರುವ ಗೂಢವಾದ ಹೆಸರನ್ನು ಧರಿಸಿರುತ್ತೀಯೆ. ಎಲೈ ಅರ್ಯಮ ನೆಂಬ ಹೆಸರಿನ ಅಗ್ನಿಯೇ ನೀನು ವಧೂವರರನ್ನು ಒಂದೇ ಮನಸ್ಸುಳ್ಳವರನ್ನಾಗಿ ಮಾಡುತ್ತೀಯೆ. ಅದರಿಂದ ಎಲ್ಲರಿಗೂ ಸ್ನೇಹಿತನಂತಿರುವ ಚನ್ನಾಗಿ ಇಡಲ್ಪಟ್ಟಿರುವ ನಿನ್ನನ್ನು ಆಜ್ಯಾದಿಗಳಿಂದ ಕಾಂತಿಯುಕ್ತನನ್ನಾಗಿ ಮಾಡುತ್ತಾರೆ.

ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾಜಾತಾನಿ ಪರಿತಾ ಬಭೂವ ।

ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ

ಪತಯೋರಯೀಣಾಂ ಸ್ವಾಹಾ ॥ ೫ ॥

ಎಲೈ ಪ್ರಜಾಪತಿಯೇ ನಿನಗಿಂತಲೂ ಬೇರೆ ಯಾವನು ತಾನೇ ಇದ್ದಾನೆ. ಈ ಎಲ್ಲವನ್ನೂ ಯಾರೂ ತೆಗೆದುಕೊಳ್ಳುವುದಿಲ್ಲ. ನಿನಗಿಂತ ಬೇರೆ ಯಾವನೂ ಸಮರ್ಥನೂ ಆಗಿಲ್ಲ. ಆದ್ದರಿಂದ ಯಾವ ಅಪೇಕ್ಷೆಯುಳ್ಳ ನಾವು ನಿನಗೆ ಹೋಮವನ್ನು ಮಾಡುತ್ತೇವೆಯೋ ಆ ಇಷ್ಟಾರ್ಥವು ನಮಗೆ ಸಿದ್ಧಿಸಲಿ. ನಾವು ಧನಕ್ಕೆ ಯಜಮಾನರಾಗೋಣ.

**ಪಾಣಿಗ್ರಹಣ :**

"ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಮಿತ್ಯಂಗುಷ್ಠಮೇವ ಗೃಹ್ಣೀಯಾತ್ ಯದಿ ಕಾಮಯೀತ ಪುಮಾಂಸ ಏವ ಮೇ ಪುತ್ರಾ ಜಾಯೇರನ್ನಿತ । ಅಂಗುಲೀರೇವ ಸ್ತ್ರೀಕಾಮಃ । ರೋಮಾಂತೇ ಹಸ್ತಂ ಸಾಂಗುಷ್ಠವ ಉಭಯ ಕಾಮಃ" ಎಂದು ಸೂತ್ರಕಾರರು ಹೇಳಿರುತ್ತಾರೆ.

ಕೇವಲ ಗಂಡುಮಕ್ಕಳೇ ಅಪೇಕ್ಷೆಯುಳ್ಳವನಾದರೆ ಕುಳಿತಿರುವ ವಧುವಿನ ಹೆಬ್ಬೆಟ್ಟನ್ನು ಮಾತ್ರ ಹಿಡಿದೆಬ್ಬಿಸಬೇಕು. ಕೈ ಬೆರಳುಗಳನ್ನೇ ಹಿಡಿದಲ್ಲಿ ಹೆಣ್ಣು ಮಕ್ಕಳಾಗುತ್ತವೆ, ಗಂಡು ಹೆಣ್ಣು ಮಕ್ಕಳಿಬ್ಬರೂ ಬೇಕಾದರೆ ಹೆಬ್ಬೆಟ್ಟನ ಸಮೇತ ಎಲ್ಲಾ ಬೆರಳುಗಳನ್ನೂ ಹಿಡಿದೆಬ್ಬಿಸಬೇಕು ಎಂದು ಹೇಳಿದೆ.

ಮಂತ್ರ-ಮಂತ್ರಾರ್ಥ : ಗೃಭ್ಣಾಮಿ ತೇ...ದೇವಾಃ ॥

ಎಲೈ ವಧುವೇ ಗೃಹ್ಯಕರ್ಮಗಳನ್ನು ಮಾಡುವುದಕ್ಕಾಗಿಯೂ ಸೌಭಾಗ್ಯಕ್ಕೋಸ್ಕರವಾಗಿಯೂ ನೀನು ನನ್ನೊಡನೆ ಮುಪ್ಪಿನ ಪರ್ಯಂತವೂ ಇರುತ್ತೀಯೆ. ಭಗ, ಅರ್ಯಮ, ಸವಿತಾ, ಪುರಂದಿ, ಪೂಷಾ ಈ ದೇವತೆಗಳು ನಿನ್ನನ್ನು ನನಗೆ ಕೊಟ್ಟರು. ಏತಕ್ಕೆಂದರೆ ನಾನು ಮನೆಯ ಯಜಮಾನನಾಗುವುದಕ್ಕಾಗಿ ಕೊಟ್ಟಿರುತ್ತಾರೆ.

**ಲಾಜಹೋಮ :**

ಅರ್ಯಮಣಂ ನು ದೇವಂ ಕನ್ಯಾ ಅಗ್ನಿಮಯಕ್ಷತ ।

ಸ ಇಮಾಂ ದೇವೋ ಅರ್ಯಮಾ ಪ್ರೇತೋ ಮುಂಚಾತುನಾಮುತಃ ಸ್ವಾಹಾ॥೧॥

ವರುಣಂ ನು ದೇವಂ ಕನ್ಯಾ ಅಗ್ನಿಮಯಕ್ಷತ ।

ಸ ಇಮಾಂ ದೇವೋ ವರುಣಃ ಪ್ರೇತೋ....ಸ್ವಾಹಾ ॥ ೨ ॥

ಪೂಷಣಂ ನು ದೇವಂ ಕನ್ಯಾ ಅಗ್ನಿಮಯಕ್ಷತ ।

ಸ ಇಮಾಂ ದೇವಃ ಪೂಷಾಪ್ರೇತೋ....ಸ್ವಾಹಾ ॥ ೩ ॥

ಈ ರೀತಿಯಾಗಿ ಮಂತ್ರಗಳನ್ನು ಪಠಿಸುತ್ತಾ ಮೂರಾವರ್ತಿ ಲಾಜ ಹೋಮವನ್ನು ಮಾಡಬೇಕು. ಒಂದೊಂದು ಸಲವೂ ವಧುವಿನ ಕೈಗೆ ವರನು ನೀರನ್ನು ಹಾಕಿ ಕೈತೊಳೆಸಿ ಅಭಿಘಾರಮಾಡಿ ಅವದಾನಧರ್ಮದಂತೆ ವಧುವಿನ ಸಹೋದರನಿಂದ ಲಾಜವನ್ನು ಹಾಕಿಸಿ ಪುನಃ ಅಭಿಘಾರಮಾಡಿ ಹೋಮವನ್ನು ಮಾಡಿ ವಧುವಿನ ಕೈಯನ್ನು ಹಿಡಿದುಕೊಂಡು "ಅಮೋಽಹ ಮಸ್ಮಿ ಸಾತ್ವಂ ಸಾ ತ್ವಮಸ್ಯ ಮೋಽಹಂ ದ್ಯೌರಹಂ ಪೃಥಿವೀ ತ್ವಂ ಸಾಮೋಽಹಮೃಕ್ತ್ವಂ ತಾವೇಹ ವಿವಹಾವಹೈ ಪ್ರಜಾಂ ಪ್ರಜನಯಾವಹೈ ಸಂಪ್ರಿಯೌ ರೋಚಿಷ್ಣೂ ಸುಮನಸ್ಯಮಾನೌ ಜೀವೇವ ಶರದ ಶ್ಶತಮಿತಿ" ಪ್ರದಕ್ಷಿಣ ಮಗ್ನಿ ಮುದಕುಂಭಂ ಚತ್ರಿಃ ಪರಿಣಯಂ ಜಪತಿ ||

ಈ ಮಂತ್ರವನ್ನು ಪಠಿಸುತ್ತಾ ಅಗ್ನಿಯನ್ನು ಉದಕುಂಭ ಸಹಿತವಾಗಿ ಪ್ರದಕ್ಷಿಣೆಯನ್ನು ಮಾಡಬೇಕು. ಈ ಕಾಲದಲ್ಲಿ ಮಾತ್ರ ಬ್ರಹ್ಮನನ್ನು ಬಿಟ್ಟು ಪ್ರದಕ್ಷಿಣೆ ಮಾಡಬೇಕು.

ಹೀಗೆ ಮೂರುಸಲದ ಲಾಜಹೋಮದಲ್ಲೂ ಪ್ರದಕ್ಷಿಣೆಯನು ಮಾಡುತ್ತಾ ಅಗ್ನಿಯ ಉತ್ತರ ಭಾಗದಲ್ಲಿರುವ ಕಲ್ಲಿನ ಮೇಲೆ ವಧುವನ್ನು ನಿಲ್ಲಿಸಿ ಈ ಮಂತ್ರವನ್ನು ಪಠಿಸಬೇಕು.

"ಪರಿಣೀಯ ಪರಿಣೀಯಾ ಶ್ಮಾನ ಮಾರೋಹಯತಿ |

ಇಮ ಮಶ್ಮಾನ ಮಾರೋಹಾ ಶ್ಮೇವ ತ್ವಂ ಸ್ಥಿರಾ ಭವ ||

ಸಹಸ್ವ ಪೃತನಾಯತೋಽಭಿತಿಷ್ಠ ಪೃತನ್ಯತ ಇತಿ"

ಮಂತ್ರಾರ್ಥ : ಅಮೋಽಹಮಸ್ಮಿ....ಶ್ಶತ ಮಿತಿ ||

ಎಲೈ ವಧುವೇ ನಾನು ಸಾಮಸ್ಥಾನೀಯನಾಗಿದ್ದೇನೆ. ನೀನು ಋಕ್ಸ್ಥಾನೀಯಳಾಗಿದ್ದೀಯೆ, ನಾನು ದ್ಯುಲೋಕಸ್ಥಾನೀಯನಾಗಿದ್ದೇನೆ. ನೀನು

ಪೃಥಿವೀ ಸ್ಥಾನೀಯಳಾಗಿದ್ದೀಯೆ. ಇಂತಹ ನಾವಿಬ್ಬರೂ ಈಗ ವಿವಾಹ ವಾಗೋಣ. ಆಮೇಲೆ ಸಂತಾನವನ್ನು ಉತ್ಪತ್ತಿಮಾಡೋಣ. ಪರಸ್ಪರ ಪ್ರೀತಿವಂತರಾಗಿಯೂ ರೂಪಶೀಲಾದಿಗಳಿಂದ ಸುಮನಸ್ಸುಳ್ಳವರಾಗಿಯೂ ನೂರು ವರ್ಷ ಜೀವಿಸೋಣ.

ಪರಿಣೀಯ ಪರಿಣೀಯಾಶ್ಮಾನ ಮಾರೋಹಯತಿ ।
ಇಮ ಮಶ್ಮಾನ ಮಾರೋಹಾಶ್ಮೇವ ತ್ವಂ ಸ್ಥಿರಾಭವ ॥
ಸಹಸ್ವ ಪೃತನಾಯತೋಽಭಿತಿಷ್ಠ ಪೃತನ್ಯತ ಇತಿ ॥

ಈ ಕಲ್ಲನ್ನು ಹತ್ತಿ ನಿಲ್ಲು. ಈ ಕಲ್ಲು ಎಷ್ಟು ಗಟ್ಟಿಯಾಗಿದೆಯೋ ನೀನೂ ಅಷ್ಟೇ ಗಟ್ಟಿಯಾಗಿರು. ಅಂದರೆ ದೃಢಕಾಯಳಾಗಿರು. ಶತ್ರುಗಳನ್ನು ತಡೆದು ಅವರನ್ನು ತಿರಸ್ಕರಿಸುತ್ತಾ ಅವರೆನ್ನೆಲ್ಲಾ ನಿನ್ನ ವಶಪಡಿಸಿಕೊ. ಈ ರೀತಿ ಯಾಗಿ ಲಾಜಹೋಮಾದಿಗಳಾದ ಮೇಲೆ ಉಳಿದ ಲಾಜವನ್ನೆಲ್ಲಾ "ಪ್ರಜಾಪತಯೇ ಸ್ವಾಹಾ" ಎಂದು ಹೋಮ ಮಾಡುತ್ತಾನೆ ವಧುವೂ ಶೂರ್ಪಲಾಜವನ್ನು ಹಿಡಿದಿರುತ್ತಾಳೆ.

"ಆರ್ಯಮಾಗ್ನಿ, ವರುಣಾಗ್ನಿ ಪೂಷಾಗ್ನಿ"ಗಳನ್ನು ಕುರಿತು ಕನ್ಯೆಯರು ಈ ವಧುವನ್ನು ಪಿತೃಕುಲದಿಂದ ಬಿಡಿಸಿ ಪತಿಕುಲವನ್ನು ಸೇರಿಸಲಿ ಎಂದು ಅಪೇಕ್ಷಿಸಿದ್ದರು. ಎಂದರೆ ಪತಿಕುಲವನ್ನು ಬಿಡಿಸದಿರಲಿ ಎಂದರ್ಥವು.

**ಸಪ್ತಪದಿ :**

ವಿವಾಹದಲ್ಲಿ ಸಪ್ತಪದಿಯೇ ಅತ್ಯಂತ ಮುಖ್ಯವಾದುದು. ಇದು ಸಪ್ತ ಪ ದಿದ್ದರೆ ವಿವಾಹವು ಸಿದ್ಧಿಯಾಗುವುದಿಲ್ಲ.

B. L. ಡಿಗ್ರಿಯಲ್ಲಿಯೂ ಕೂಡ. Hindu Marriage Act Section 437, ಪ್ರಕಾರ ಸಪ್ತಪದಿಯ ವಿಚಾರವನ್ನು ಹೇಳಿದೆ.

**Hindu Marriage Act (Section 437)**

The Ceremonies are essential for the Validity of a marriage.

a) Invocation before the sacred fire.
b) Saptapadi i. e.,

   The taking of seven steps by the bride-groom and bride jointly before the sacred fire.

The marriage becomes completed only when the seventh (7th) step is taken. Till then, it is imperfect and revocable .

ಸಪ್ತಪದಿಯೆಂದರೆ ಅಕ್ಕಿಯ ರಾಶಿಯನ್ನು ಏಳು ಭಾಗ ಮಾಡಿ ಒಂದೊಂದು ರಾಶಿಯ ಮೇಲೂ ವರನು ವಧುವಿನ ಹೆಬ್ಬೆಟ್ಟಿನಿಂದ ತುಳಿಸುತ್ತಾ ಒಂದೊಂದು ಸಲಕ್ಕೂ ಒಂದೊಂದು ಮಂತ್ರವನ್ನು ಹೇಳಬೇಕು.

ಇಷ ಏಕಪದೀ ಭವಸಾಮಾಮನುವ್ರತಾ ಭವ । ಪುತ್ರಾನ್ ವಿಂದಾವಹೈ ಬಹೂಂಸ್ತೇ ಸಂತು ಜರದಷ್ಟಯಃ ॥ ೧ ॥

ಶಕ್ತಿಸಾಮರ್ಥ್ಯಕ್ಕೋಸ್ಕರ ಈ ಮೊದಲನೇ ರಾಶಿಯನ್ನು ತುಳಿದಂತಹ ನೀನು ನನ್ನನ್ನು ಅನುಸರಿಸುವವಳಾಗು. ಮುಪ್ಪಿನ ಪರ್ಯಂತ ಪುತ್ರ ಸಂಪತ್ತನ್ನು ಪಡೆಯೋಣ.

ಊರ್ಜೇ ದ್ವಿಪದೀ ಭವ ಸಾಮಾಮನು ವ್ರತಾ....ಜರದಷ್ಟಯಃ ॥ ೨ ॥

ಅನ್ನಕ್ಕೋಸ್ಕರ ಈ ಎರಡನೇ ರಾಶಿಯನ್ನು ತುಳಿ.

ರಾಯಸ್ಪೋಷಾಯ ತ್ರಿಪದೀ ಭವ । ಸಾಮಾಮನು__ಜರದಷ್ಟಯಃ ॥ ೩ ॥

ನಾನು ಸಂಪಾದಿಸಿ ನಿನಗೆ ತಂದುಕೊಟ್ಟ [illegible] ಮೂರನೇ ರಾಶಿಯನ್ನು ತುಳಿ.

ಮಾಯೋ ಭವ್ಯಾಯ ಚತುಷ್ಪದೀ ಭವ| ಸಾಮಾಮನು....ಜರದಷ್ಟಯಃ ||೪||

ಮನಸ್ಸಿಗೆ ಬೇಕಾಗುವ ಆಸೆಗಳನ್ನು ತೀರಿಸಿಕೊಂಡು ಸುಖಪಡುವುದಕ್ಕಾಗಿ ನಾಲ್ಕನೇ ರಾಶಿಯನ್ನು ತುಳಿ.

ಪ್ರಜಾಭ್ಯಃ ಪಂಚಪದೀ ಭವ | ಸಾಮಾಮನು....ಜರದಷ್ಟಯಃ || ೫ ||

ಮಕ್ಕಳನ್ನು ಪಡೆಯುವುದಕ್ಕೋಸ್ಕರ ಐದನೇ ರಾಶಿಯನ್ನು ತುಳಿ.

ಋತುಭ್ಯಃ ಷಟ್ಪದೀ ಭವ | ಸಾಮಾಮನು....ಜರದಷ್ಟಯಃ || ೬ ||

ಆಯಾ ಋತುಗಳಲ್ಲಿ ಅನುಭವಿಸುವ ಭೋಗಭಾಗ್ಯಗಳ ಸಾಧನೆಗಾಗಿ ಆರನೇ ರಾಶಿಯನ್ನು ತುಳಿ.

ಸಖಾಸಪ್ತಪದೀ ಭವ ಸಾಮಾಮನು....ಜರದಷ್ಟಯಃ |

ಅನ್ಯೋನ್ಯ ಪ್ರೀತಿ ವಿಶ್ವಾಸ ಸ್ನೇಹದಿಂದ ಕೂಡಿರುವುದಕ್ಕಾಗಿ ಏಳನೇ ರಾಶಿಯನ್ನು ತುಳಿ.

ಆಮೇಲೆ "ಸ್ವಶಿರಸಾ ವಧೂಶಿರಸ್ಸಂಯೋಜ್ಯ, ಎಂದರೆ ತನ್ನ ತಲೆಯನ್ನು ವಧುವಿನ ಶಿರಸ್ಸನ್ನೂ ಸೇರಿಸಿ ಶಾಂತಿರಸ್ತ್ವಿತ್ಯಾದಿ ಮಂತ್ರಗಳಿಂದ ಪ್ರೋಕ್ಷಣೆಯಾಗಬೇಕು.

ಪಾಣಿಗ್ರಹಣ ಹೋಮವಾದ ಅಗ್ನಿಯಲ್ಲಿ ಔಪಾಸನವನ್ನು ಮಾಡಬೇಕು. ಈ ವಿವಾಹಾಗ್ನಿಯಲ್ಲಿ ಸಾಯಮೌಪಾಸನವನ್ನೇ ಆರಂಭಿಸಿ ಅಗ್ನಿಗೂ ಪ್ರಜಾಪತಿಗೂ ಆಹುತಿಯನ್ನು ಕೊಟ್ಟ ಅಗ್ನಿಯ ಉಪಸ್ಥಾನವನ್ನು ಮಾಡಿದನಂತರ ಇದೇ ಔಪಾಸನಾಗ್ನಿಯನ್ನು ತೆಗೆದುಕೊಂಡು ನೂತನ ದಂಪತಿಗಳು ತಮ್ಮ ಮನೆಗೆ ಹೋಗಿ ಅಲ್ಲಿ ಗೃಹಪ್ರವೇಶ ಹೋಮವನ್ನು ಮಾಡಿಕೊಳ್ಳಬೇಕು (ಈ ಸಂಪ್ರದಾಯವು ಕೇಚಿತ್ಪಕ್ಷವಾಗಿದೆ)

**ಗೃಹಪ್ರವೇಶ ಹೋಮ :**

**ಮಂತ್ರ–ಮಂತ್ರಾರ್ಥ : ಆನಃ ಪ್ರಜಾಂ ಜನಯತು___ಶಂಚತುಷ್ಪದೇ ||**

ಪ್ರಜಾಪತಿಯು ನಮ್ಮಿಬ್ಬರಿಗೂ ಸಂತಾನವನ್ನುಂಟು ಮಾಡಲಿ. ಆರ್ಯಮನು ನಮ್ಮ ವೃದ್ಧಾಪ್ಯದವರೆಗೂ ನಮ್ಮ ಜೀವಿಕೆಗೆ ಸೇರಿಸಿರಲಿ. ಎಲೈ ವಧುವೇ ನೀನು ಕೃತ್ರಿಮದ ಬುದ್ಧಿಯವಳಲ್ಲದೇ ಕೃತಜ್ಞಳಾಗಿದ್ದು ಪತಿಯ ಗೃಹವನ್ನು ಹೊಂದು. ನಮ್ಮ ಭೃತ್ಯಾದಿಗ ವಿಷಯದಲ್ಲಿ ಸಂತೋಷಯುಕ್ತ ಳಾಗಿರು. ಸುಖಕರಳಾಗಿರು: ಪಶ್ವಾದಿಗಳ ವಿಷಯದಲ್ಲಿಯೂ ಸುಖಕರಳಾಗಿರು.

ಸಮಂಜಂತು....ಹೃದಯಾನಿನೌ: ನಮ್ಮಿಬ್ಬರ ಹೃದಯಗಳನ್ನು ವಿಶ್ವೇ ದೇವರುಈ ಶುಷ್ಪ ದಿಂದ ನೆನೆಸಲಿ. ನಮ್ಮ ಕಷ್ಟಕಾರ್ಪಣ್ಯಗಳನ್ನು ಹೋಗಲಾಡಿಸಿ ಲೌಕಿಕ ವೈದಿಕ ವಿಷಯಗಳಲ್ಲಿ ಪ್ರಕಾಶವುಳ್ಳವರನ್ನಾಗಿ ಮಾಡಲಿ. ಅಂದರೆ ಆಸಕ್ತಿಯುಳ್ಳವರನ್ನಾಗಿ ಮಾಡಲಿ, ಹಾಗೆಯೇ ಉದಕವೂ ನಮ್ಮಿಬ್ಬರ ಹೃದಯವನ್ನು ನೆನೆಸಲಿ. ಮಾತರಿಶ್ವನೂ ಬ್ರಹ್ಮನೂ ನಮ್ಮಿಬ್ಬರ ಮನಸ್ಸನ್ನು ಒಂದಾಗಿ ಕೂಡಿರುವಂತೆ ಮಾಡಿ ನಮ್ಮಲ್ಲಿರಲಿ, ಸರಸ್ವತಿಯೂ ಚನ್ನಾಗಿ ನಮ್ಮನ್ನಿಟ್ಟಿರಲಿ.

**ಅರುಂಧತೀ ಪೂಜೆ :**

ಪ್ರಧಾನ ಹೋಮವಾದ (ಲಾಜಹೋಮ) ನಂತರ ಸಾಯಂಕಾಲಕ್ಕೆ ವಧೂವರರು ಅರುಂಧತಿಯನ್ನೂ ಸಪ್ತಋಷಿಗಳನ್ನೂ ನೋಡಿ ಅವರಿಗೆ ಪೂಜೆ ಯನ್ನು ಮಾಡಿ. ನೋಡುತ್ತಾ ವಧುವಿನಿಂದ "ಜೀವಪತ್ನೀ ಪ್ರಜಾಂ ವಿಂದೇಯ" ನಾನು ಪತಿಯುಕ್ತಳಾಗಿ ಸಂತಾನವನ್ನು ಪಡೆಯುವಂತೆ ಅನುಗ್ರಹಿಸು" ಎಂದು ಹೇಳಿಸಬೇಕು.

**ನಾಕಬಲಿ :**

ನಾಕಬಲ್ಯುತ್ಸವವೆಂದರೆ ಮಾನಸ ಸರೋವರವನ್ನು ನಾನಾ ವರ್ಣಗಳಿಂದ ಬರೆದು ಅದರಲ್ಲಿ ಕಲ್ಪೋಕ್ತ ದೇವತೆಗಳನ್ನೆಲ್ಲಾ ಆವಾಹನೆ ಮಾಡಿ ಪೂಜಿಸ ಬೇಕು. ಕಾಲಲೋಪದಿಂದ ಅವೆಲ್ಲ ಲುಪ್ತವಾಗಿದೆ.

ಪ್ರಕೃತದಲ್ಲಿ ಅಷ್ಟದಳ ಪದ್ಮವನ್ನು ಬರೆದು ಅದರ ಮೇಲೆ ಕಲಶದ್ವಯ ವನ್ನಿಟ್ಟು ಆ ಕಲಶದ್ವಯಕ್ಕೂ ಹಸ್ತಿಹಸ್ತಗಳಿಗೂ ಛುರಿಕ, ನೀಲಲೋಹಿತ

ತಾಂಬೂಲಗಳಿಗೆ ಪೂಜೆಯನ್ನು ಮಾಡಿದ ನಂತರ ಸುವಾಸಿನಿಯರು ನಾಲ್ಕು ದಿಕ್ಕಿನ ದೇವತೆಗಳಿಗೂ ದಿಗ್ಬಲಿಯನ್ನು ಹಾಕುತ್ತಾರೆ.

ನಿರೀಕ್ಷಣ ಕಾಲದಲ್ಲಿ ವಧುವನ್ನು ಕರೆದುಕೊಂಡು ಬರುವಾಗ ವಧುವು ಉಟ್ಟಿರುವ ಸೀರೆಯ ಮೇಲೆ ಮತ್ತೊಂದು ಸೀರೆಯನ್ನು ಹೊದ್ದುಕೊಂಡು ಬಂದಿರುತ್ತಾಳೆ. ನಾಕಬಲಿಯಲ್ಲಿ ತ್ರಯಸ್ತ್ರಿಂಶತ್ಕೋಟಿ ದೇವತಾ ಪೂಜೆಯಾದ ಮೇಲೆ "ಚರಿತವ್ರತಸ್ಸೂರ್ಯಾವಿದೇ ವಧೂವಸ್ತ್ರಂದದ್ಯಾತ್" ಎಂದು ಸೂತ್ರಕಾರರು ಹೇಳಿರುವುದರಿಂದ ಪುರೋಹಿತನು ಸೂರ್ಯಾಸೂಕ್ತವನ್ನು ಪಠಿಸಿದ ನಂತರ ವಧುವು ಕನ್ನ ಧರಿಸಿದ್ದ ಆ ಸೀರೆಯನ್ನು ಪುರೋಹಿತನಿಗೆ ಕೊಡಬೇಕು. ಈ ಪದ್ಧತಿಯು ಅನೇಕರಿಗೆ ಗೊತ್ತಿಲ್ಲದೇ ನಿಂತು ಹೋಗಿದೆ. (ಕಾರಣವು ಸೂರ್ಯಾಸೂಕ್ತದ ೨೯-೩೦-೩೪-೩೫ನೇ ಋಕ್ಕುಗಳಲ್ಲಿ ಹೇಳಲ್ಪಟ್ಟಿದೆ. ನಂತರ ವರಮಾತೃವು ಪ್ರಾಚಿತಿಷ್ಠತ್ಯಾದಧತಿ ಎಂಬ ಐತರೇಯ ಬ್ರಾಹ್ಮಣ ಖಂಡದಿಂದ ನಾಲ್ಕು ದಿಗ್ದೇವತೆಗಳಿಗೂ ಅಕ್ಷತೋದಕವನ್ನು ಬಿಡಬೇಕು.

ನೀಲಲೋಹಿತಧಾರಣೆ ತಾಂಬೂಲ ಚರ್ವಣ ಹಸ್ತಿಹಸ್ತ ವಿನಿಮಯಗಳಾದಮೇಲೆ ಕನ್ಯಾಮಾತೆಯು ವಧುವಿಗೆ ಸೋಬಲಕ್ಕಿಯನ್ನಿಡುವುದು. ನಂತರ ನೂತನ ವಧೂ ಪ್ರವೇಶ ವಸಂತಮಾಧವ ಪೂಜೆ

**ಐತರೇಯ ಬ್ರಾಹ್ಮಣೋಕ್ತ ವಸಂತಮಾಧವ ಖಂಡಃ ||**

ದೀಕ್ಷಾ ವೈ ದೇವಭ್ಯೋಽಪಾಕ್ರಾಮತ್ತಾಂ ವಾಸಂತಿಕಾಭ್ಯಾಂ ಮಾಸಾಭ್ಯಾಮನ್ವಯುಂಜತ ತಾಂ ವಾಸಂತಿಕಾಭ್ಯಾಂ ಮಾಸಾಭ್ಯಾಂ ನೋದಾಪ್ನುವಂಸ್ತಾಂಗ್ರೈಷ್ಮಾಭ್ಯಾಂ ತಾಂ ವಾರ್ಷಿಕಾಭ್ಯಾಂ ತಾಂ ಶಾರದಾಭ್ಯಾಂ ತಾಂ ಹೈಮನ್ತಿಕಾಭ್ಯಾಂ ಮಾಸಾಭ್ಯಾಮನ್ವಯುಂಜತ ತಾಂ ಹೈಮಂನ್ತಿಕಾಭ್ಯಾಂ ಮಾಸಾಭ್ಯಾಂ ನೋದಾಪ್ನುವಂ ಸ್ತಾಂ ಶೈಶಿರಾಭ್ಯಾಂ ಮಾಸಾಭ್ಯಾಮನ್ವಯುಂಜಂತ ತಾಂ ಶೈಶಿರಾಭ್ಯಾಂ ಮಾಸಾಭ್ಯಾ ಮಾಪ್ನುವನ್ನಾಪ್ನೋತಿ ಯಮಿಚ್ಛತಿ ನೈನಂ ದ್ವಿಷನ್ನಾಪ್ನೋತಿಯ ಏವಂ ವೇದ ॥

ಮಂತ್ರಾರ್ಥ :–ಯಜ್ಞ ಯಾಗಾದಿಗಳು ನಡೆದರೆ ಯಾಗವೆಲ್ಲ ಮುಗಿದ ನಂತರ ಋತ್ವಿಜರೂ ಯಜಮಾನ ದಂಪತಿಗಳೂ ನದೀತೀರಕ್ಕೆ ಹೋಗಿ ಅಲ್ಲಿ

ಅವಭೃದೇಷ್ಟಿಯೆಂಬ ಕರ್ಮವನ್ನು ಮಾಡಿ ನಾವು ಮಾಡಿದ ಯಾಗವು ಮುಗಿದು ಕೃತಾರ್ಥರಾದೆವೆಂದೂ ಭಗವದರ್ಪಣವಾಯಿತೆಂದೂ ಹರ್ಷಚಿತ್ತರಾಗಿ ಮಂಗಳ ಸ್ನಾನಾದಿಗಳನ್ನು ಮಾಡಿಕೊಂಡು ಯಜ್ಞಶಾಲೆಗೆ ಹಿಂತಿರುಗಿ ಬರುವುದುಂಟು. ಸೂತ್ರದಲ್ಲಿಯೂ "ಏಷೋಽವಭೃಥಃ" ಎಂದು ಹೇಳಿರುವುದರಿಂದ ವಧೂವರರು ಈ ವಿವಾಹ ದೀಕ್ಷೆಯೂ ಮುಗಿಯಿತೆಂದು ವಸಂತ ಮಾಧವ ಪೂಜೆಯನ್ನು ಮಾಡಿ ಮೇಲ್ಕಂಡ ಮಂತ್ರಗಳಿಂದ ಮಾರ್ಜನೆಯನ್ನು ಮಾಡಿಸಿಕೊಂಡು ತೀರ್ಥಪ್ರಾಶನೆಯನ್ನು ಮಾಡಬೇಕು.

ಒಂದಾನೊಂದು ಕಾಲದಲ್ಲಿ ದೀಕ್ಷಾಭಿಮಾನಿ ದೇವತೆಯು ಯಜ್ಞ ಮಾಡಬೇಕೆಂದಿರುವ ದೇವತೆಗಳನ್ನು ಬಿಟ್ಟು ಅಸಮಾಧಾನದಿಂದ ಓಡಿ ಹೋಯಿತು. ಆಗ ದೇವತೆಗಳು ಅದನ್ನು ಹುಡುಕುತ್ತಾ ಅದನ್ನು ಹಿಂದಕ್ಕೆ ತರಲಾರದೇ ಚೈತ್ರ ವೈಶಾಖ ಮಾಸಗಳಿಂದ ಕೂಡಿದ ವಸಂತಋತುವಿನಲ್ಲಿ ಸೇರುವಂತೆ ಮಾಡಿದರು. ಏಕೆಂದರೆ ವಸಂತ ಋತುವಿನಲ್ಲಿ ದೀಕ್ಷೆಯಿದ್ದರೆ ತಾವು ದೀಕ್ಷೆಯನ್ನು ಪಡೆದು ಯಜ್ಞ ಮಾಡುವುದಕ್ಕೆ ಅನುಕೂಲವಾಗುವು ದೆಂದು ಯೋಚಿಸಿದರು. ಹಾಗೆ ನಡೆಯದೇ ದೀಕ್ಷೆಯು ವೇಗವಾಗಿ ಮುಂದೆ ಮುಂದೆ ಹೊರಡುತ್ತಿದ್ದಿತು. ದೇವತೆಗಳು ಅದನ್ನು ಹಿಂಬಾಲಿಸುತ್ತಾ ಹೋಗಿ ಗ್ರೀಷ್ಮಋತು, ವರ್ಷಋತು, ಶರದ್‌ಋತು, ಹೇಮಂತ ಋತುಗಳಲ್ಲಾದರೂ ಸೇರಿಸಬೇಕೆಂದು ಪ್ರಯತ್ನಿಸಿ ಸಾಧ್ಯವಾಗದೇ ವಿಫಲರಾದರು. ಕೊನೆಗೆ ಶಿಶಿರ ಋತುವಿನಲ್ಲಿ ದೀಕ್ಷೆಯನ್ನು ಸೇರಿಸಿ ಸಫಲರಾದರು. ಯಾವ ಮನುಷ್ಯನು ಈ ವಿಷಯಗಳನ್ನೆಲ್ಲಾ ತಿಳಿದು ಶಿಶಿರ ಋತುವಿನಲ್ಲಿ ದೀಕ್ಷೆಯನ್ನು ಕೈಗೊಳ್ಳುವನೋ ಅವನು ಸಕಲೇಷ್ಟಾರ್ಥಗಳನ್ನೂ ಪಡೆದು ಸುಖಿಯಾಗುವನು.

"ಇಹಪ್ರಿಯಂ ಪ್ರಜಯಾ ತೇ ಸಮೃಧ್ಯತಾ ಮಿತಿ ಗೃಹಂ ಪ್ರವೇಶ-ಯೇತ್" ಎಂದು ಸೂತ್ರಕಾರರು ಹೇಳಿರುವುದರಿಂದ ಈ ಮಂತ್ರವನ್ನು ಹೇಳುತ್ತಾ ವರನು ಮಂಗಳ ದ್ರವ್ಯಗಳೊಡನೆ ವಧುವಿನೊಡನೆ ತನ್ನ ಮನೆ ಯನ್ನು ಪ್ರವೇಶ ಮಾಡಬೇಕು.

ಓ ತತ್ಸತ್